**ಮೊನ್ನ ವನ್ನ**—ಎಂಬುದು ಬೆಲ್ಜಿಯಂ ದೇಶದ ಮ್ಹಾರಿಸ್ ಮ್ಯಾಟರ್‌ಲಿಂಕ್ ಎಂಬ ಕವಿ ಬರೆದಿರುವ ಮೂರು ಅಂಕಗಳ ನಾಟಕ.

ಪೀಸಾ ನಗರಕ್ಕೂ ಫ್ಲಾರೆನ್ಸ್ ನಗರಕ್ಕೂ ನಡೆದ ಯುದ್ಧ ಇದರ ಹಿನ್ನೆಲೆ. ಆ ಸಂದರ್ಭದಲ್ಲಿ ಒದಗಿದ ಒಂದಾನೊಂದು ಧರ್ಮಸಂಕಟ ಇದರ ವಸ್ತು. ಆ ಧರ್ಮ ಸಂಕಟದಲ್ಲಿ ಸಿಕ್ಕಿಕೊಂಡ ಒಂದು ನಾಲ್ಕು ಜೀವಗಳ ಧೈರ್ಯ ಸ್ಥೈರ್ಯ, ರಾಗ ವಿರಾಗ, ಸ್ವಾರ್ಥ ಪರಾರ್ಥ, ದಾಕ್ಷಿಣ್ಯ ನಿರ್ದಾಕ್ಷಿಣ್ಯ ಇವುಗಳ ವಿಲಾಸದ ಚಿತ್ರಣವೆ ಇಲ್ಲಿನ ಸೊಗಸು. ಈ ಪ್ರಕರಣಗಳಲ್ಲಿ ಹೊಮ್ಮುವ ನ್ಯಾಯ ಅನ್ಯಾಯ, ಧರ್ಮ ಅಧರ್ಮ, ಋಜು ಕುಟಿಲ, ಸತ್ಯ ಅಸತ್ಯ ಮೊದಲಾದ ದ್ವಂದ್ವಗಳ ಸಾರಾಸಾರದ ವಿವೇಚನೆಯೇ ಇಲ್ಲಿನ ಪರಿಮಳ.

ಧರ್ಮಸಂಕಟಕ್ಕೆ ಸಿಲುಕಿದವರ ಕಥೆ ನಮಗೇನೂ ಹೊಸದಲ್ಲ. ರಾಮನು ಸೀತೆಯನ್ನು ಪರಿತ್ಯಾಗ ಮಾಡಿದ ಪ್ರಕರಣ, ಹರಿಶ್ಚಂದ್ರನು ಪತ್ನೀಪುತ್ರರನ್ನು ವಿಕ್ರಯ ಮಾಡಿ ತಾನು ಅನಾಮಿಕನಿಗೆ ಆಳಾದದ್ದು, ಕರ್ಣನ ಜೀವನದಲ್ಲಿ ಕೃಷ್ಣ ಕುಂತಿಯರು ತಂದಿಟ್ಟ ಇಕ್ಕಟ್ಟು, ಅಲ್ಲಾವುದೀನನು ಚಿತ್ತೋರನ್ನು ಮುತ್ತಿದಾಗ ಪದ್ಮಿನಿಗೆ ಒದಗಬಹುದಾಗಿದ್ದ ಪಾಡು–ಇಂಥವು ಇನ್ನೂ ಎಷ್ಟೋ.

ಆದರೆ ಅಲ್ಲಲ್ಲಿ ಏನೇನು ಪರಿಹಾರ ಒದಗಿ ಬಂತೋ ಅಲ್ಲಿಗೆ ಅದು ಒಂದೇ ಪರಿಹಾರವೆ? ಬೇರೆ ಮಾರ್ಗಾಂತರ ಗಳುಂಟೆ? ವಿಚಾರವಂತರಿಗೆ ಇದು ವಿಷಯ.

[ಕಡೆಯ ರಟ್ಟಿನ ಒಳಗೆ ನೋಡಿ.

**ಬೆಲೆ: ಎರಡು ರೂಪಾಯಿ**

**ಕ್ಯಾಲಿಕೊ ಪ್ರತಿ: ಮೂರು ರೂಪಾಯಿ**

ಮಾರಿಸ್ ಮ್ಯಾಟರ್‌ಲಿಂಕ್ ಕವಿಯ

# ಮೊನ್ನ ವನ್ನ

(ಮೂರು ಅಂಕಗಳ ನಾಟಕ)

ಎಸ್. ಜಿ. ಶಾಸ್ತ್ರಿ

1952

ಕರ್ಣಾಟಕ ಸಂಘ
ಸೆಂಟ್ರಲ್ ಕಾಲೇಜ್, ಬೆಂಗಳೂರು

## ಸಂಘದ ಅರಿಕೆ

ಋತುಧರ್ಮವನ್ನು ಅನುಸರಿಸಿ ಮತ್ತೆ ಚಿಗುರೊಡೆಯುವ ಕೊಂಬೆ ತನ್ನ ವೃಕ್ಷದ ಸ್ಕಂಧವನ್ನೂ ಅದರ ಅಡಿಯಲ್ಲಿ ಮೇಲುನೋಟಕ್ಕೆ ಮೆರೆಯದಿರುವ ಬೇರುಗಳನ್ನೂ ಮರೆಯದೆ ಜ್ಞಾಪಿಸಿಕೊಳ್ಳುವುದು ಅದರ ಶ್ರೇಯಸ್ಸಿಗೇ ಸಹಾಯ. ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದ ವೃಕ್ಷದಲ್ಲಿ ಅದರ ಪ್ರಕಟನಶಾಖೆ ಒಂದು ಪುಷ್ಪಫಲಭರಿತವಾದ ಕೊಂಬೆಯಾಗಿ ಕೆಲಸಮಾಡಿತು. ಆಗಸ್ಟ್ ೧೯೧೮ರಲ್ಲಿ **ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳು** ಈ ಸಂಘವನ್ನು ಸ್ಥಾಪಿಸಿ, ಒಂದು ವರ್ಷದನಂತರ ೧೯೧೯ರಲ್ಲಿ **'ಪ್ರಬುದ್ಧ ಕರ್ಣಾಟಕ'** ವನ್ನು ಪ್ರಾರಂಭಿಸಿ, ಪ್ರಬುದ್ಧ ಕರ್ಣಾಟಕದ ಪುಟಗಳಿಂದ ಪುಟವಿಟ್ಟು ಪುಸ್ತಕಗಳನ್ನು ಹೇಗೆ ಸೃಷ್ಟಿಸಿದರೆಂಬ ಸತ್ಯಕಥೆಯು ಇಪ್ಪತ್ತನೆಯ ಶತಮಾನದ ಕನ್ನಡ ಇತಿಹಾಸವನ್ನು ನಿಷ್ಪಕ್ಷಪಾತವಾಗಿ ಬರೆಯಬೇಕೆನ್ನುವವರು ಎಲ್ಲರೂ ಗಮನಿಸಬೇಕಾದದ್ದು. ಪುಸ್ತಕಗಳು ಒಳಗೇ ಆಗಲಿ, ಅವು ಹೊರಗೇ ಆಗಲಿ —ಅನಂತರದವರಿಗೆ ಒಂದು ಮಾರ್ಗದರ್ಶನ ಮಾಡಿಸುವಂತೆ ಹೃಷ್ಟವಾಗಿ ಪುಷ್ಟವಾಗಿ ಸಾರ್ಥಾಲಂಕಾರಭೂಷಿತವಾಗಿ ಪ್ರಕಾಶಗೊಂಡವು. ಈ ಕತೆಯನ್ನು 'ಪ್ರಬುದ್ಧ ಕರ್ಣಾಟಕದ ಹುಟ್ಟು ಮತ್ತು ಬೆಳೆವಣಿಗೆ'* ಎಂಬ ಲೇಖನದಲ್ಲಿ ಶ್ರೀ ಕೃಷ್ಣಶಾಸ್ತ್ರಿಗಳೇ ನಿರೂಪಿಸಿದ್ದಾರೆ.

ಈಗ ಮತ್ತೆ, ಹದಿಮೂರು ವರ್ಷಗಳು ಕಳೆದ ಮೇಲೆ, ಸಂಘವು ಹೊಸ ಪ್ರಕಟನೆಗಳನ್ನು ಕೈಕೊಂಡಿದೆ. ಅವುಗಳಲ್ಲಿ ಶ್ರೀ **ಕೈಲಾಸಂ ಅವರ ಸ್ಮರಣೆ** —ಕೆ. ವಿ. ಅಯ್ಯರ್, **ಕರ್ಣಾಟಕ ಮಾಲವಿಕಾಗ್ನಿಮಿತ್ರ ನಾಟಕಂ**— ಮೋ. ಶಂ. ಸುಬ್ರಹ್ಮಣ್ಯಶಾಸ್ತ್ರಿ, ಇವು ಮೊದಲಿನೆರಡು. ಇದು ಮೂರನೆಯ ಪುಸ್ತಕ: ಶ್ರೀ ಎಸ್. ಜಿ. ಶಾಸ್ತ್ರಿ ಅವರು ಕನ್ನಡಿಸಿರುವ **'ಮೊನ್ನ ವನ್ನ'.**

ಶ್ರೀಮಾನ್ ಎಸ್. ಜಿ. ಶಾಸ್ತ್ರಿಗಳು ಹಿಂದಿನಿಂದಲೂ ನಮ್ಮ ಸಂಘದ ಮೇಲೆ ಅಭಿಮಾನವಿಟ್ಟಿರುವವರು. ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ಕೃತ, ಕಾರಿತ, ಅನುಮೋದನ ಎಂಬ ಮೂರೂ ತೆರದಿಂದ ಕರ್ಮ ಮಾಡುತ್ತಿರುವವರು. ಸರಿ

---

* ಪ್ರಬುದ್ಧ ಕರ್ಣಾಟಕ: ತಾರಣ ಸಂವತ್ಸರ, ಬೆಳ್ಳಿಯ ಸಂಚಿಕೆ, ೧೯೪೪.

ಯಾಗಿ ಇಪ್ಪತ್ತು ವರ್ಷಗಳ ಹಿಂದೆ, ಇವರ **'ಸೋಕ್ರಟೀಸನ ಮರಣ'** ವನ್ನು ಪ್ರಕಟಿಸುವ ಯೋಗ ಇದೇ ಸಂಘಕ್ಕೆ ಒದಗಿತ್ತು. ಈಗ ಕೂಡ, ಈ **'ಮೊನ್ನ ವನ್ನ'** ನಾಟಕವನ್ನು ನಮ್ಮ ಸಂಘಕ್ಕೆ ವಹಿಸಿಕೊಟ್ಟುದಕ್ಕಾಗಿ ಶ್ರೀಮಾನ್ ಶಾಸ್ತ್ರಿಗಳಿಗೆ ಸಂಘವು ತನ್ನ ಕೃತಜ್ಞತೆಗಳನ್ನು ಒಪ್ಪಿಸುತ್ತದೆ.

ಶ್ರೀ ಶಾಸ್ತ್ರಿಗಳ ಅಪ್ಪಣೆಯಂತೆ ಆರಂಭದಲ್ಲಿ ಸಿದ್ಧಪಡಿಸಿರುವ 'ಕವಿ ಕಾವ್ಯ ಪರಿಚಯ'ವೂ ಅನಂತರದ ನಾಟಕಾನುವಾದವೂ ಸಹೃದಯರ ಮಡಿಲಿನಲ್ಲಿ ಇರಲಿ.

೧೫, ಆಗಸ್ಟ್, ೧೯೫೨.
ಸೆಂಟ್ರಲ್ ಕಾಲೇಜ್, ಬೆಂಗಳೂರು.

**ಜಿ. ಪಿ. ರಾಜರತ್ನಂ**
ಕರ್ಣಾಟಕ ಸಂಘದ ಪರವಾಗಿ.

## ಪೂರ್ವದ ಪ್ರಕಟಣೆಗಳು

[ಹಿಂದಿನ ಪರ್ವದ ಪ್ರಕಟಣೆಗಳನ್ನು ಇಲ್ಲಿ ಜ್ಞಾಪಿಸಿಕೊಳ್ಳುವುದು ಅಪ್ರಕೃತವಾಗದು. ಶ್ರೀ ಕೃಷ್ಣಶಾಸ್ತ್ರಿಗಳ ಕಾಲದಲ್ಲಿ ಪ್ರಬುದ್ಧ ಕರ್ಣಾಟಕದ ಸಂಪುಟಗಳಿಂದ ಪುಸ್ತಕ ರೂಪವನ್ನು ತಾಳಿಬಂದವುಗಳ ಪಟ್ಟಿ ಕೆಳಗಿದೆ; ಎಡಗಡೆಯ ಅಂಕಿ—ಪ್ರಬುದ್ಧ ಕರ್ಣಾಟಕದಲ್ಲಿ ಅದು ತೊಡಗಿದ ವರ್ಷ, ಬಲಗಡೆಯ ಅಂಕಿ—ಅದು ಪುಸ್ತಕರೂಪವಾಗಿ ಹೊರಗೆ ಬಂದ ವರ್ಷ. ದಪ್ಪ ಅಕ್ಷರದಲ್ಲಿ ತೋರಿಸಿರುವ ನಾಲ್ಕು—ಪ್ರಬುದ್ಧ ಕರ್ಣಾಟಕದ ಚಂದಾದಾರರಿಗೆ ಉಚಿತವಾಗಿ ಕೊಡುವುದಕ್ಕೆಂದೇ ಪ್ರಕಟವಾದ ಸ್ವತಂತ್ರ ಪುಸ್ತಕಗಳು.]

1922. ಪ್ರತಿಮಾನಾಟಕಂ—ಮೈಸೂರು ಸೀತಾರಾಮಶಾಸ್ತ್ರೀ ... 1923

1923. ಮೈಸೂರು ದೇಶದ ವಾಸ್ತುಶಿಲ್ಪ—ಬಿ. ವೆಂಕೋಬರಾವ್ ... 1928

**ವಸಂತ ಕುಸುಮಾಂಜಲಿ**—ಡಿ. ವಿ. ಗುಂಡಪ್ಪ ... 1923

**ನಿವೇದನ**—ಡಿ ವಿ. ಗುಂಡಪ್ಪ ... 1924

1925. ಕರ್ಣಾಟಕ ಸ್ವಪ್ನವಾಸವದತ್ತ ನಾಟಕಂ—
ಎಂ. ಡಿ. ಅಳಸಿಂಗರಾಚಾರ್ ... 1925

1925. ಕೆಲವು ಕನ್ನಡ ಕವಿಗಳ ಜೀವನಕಾಲವಿಚಾರ—
ಎ. ವೆಂಕಟಸುಬ್ಬಯ್ಯ ... 1927

1925. ಮುದ್ದಣ—ಹಲವು ಲೇಖಕರಿಂದ ... 1926

1925. ವಿಗಡ ವಿಕ್ರಮರಾಯ—ಸಂಸ ... 1926

1926. ಗದಾಯುದ್ಧ ನಾಟಕಂ—ಬಿ. ಎಂ. ಶ್ರೀಕಂಠಯ್ಯ ... 1926

**ಇಂಗ್ಲಿಷ್ ಗೀತೆಗಳು**—ಬಿ. ಎಂ. ಶ್ರೀಕಂಠಯ್ಯ ... 1926

1926. ಭಕ್ತಿಭಾಂಡಾರಿ ಬಸವೇಶ್ವರರು—
ಎಂ. ಆರ್. ಶ್ರೀನಿವಾಸಮೂರ್ತಿ ... 1928

1929. ಅಶ್ವತ್ಥಾಮನ್—ಬಿ. ಎಂ. ಶ್ರೀಕಂಠಯ್ಯ ... 1929

1929. ಉಮರನ ಒಸಗೆ—ಡಿ. ವಿ. ಗುಂಡಪ್ಪ ... 1930

1930. ಭಾಸಕವಿ—ಎ. ಆರ್. ಕೃಷ್ಣಶಾಸ್ತ್ರೀ ... 1933

**ತಾವರೆ—ಮಾಸ್ತಿ ವೆಂಕಟೇಶ ಅಯ್ಯಂಗಾರ್** ... 1930

1930. ಸೋಕ್ರಟೀಸನ ಮರಣ—ಎಸ್. ಜಿ. ಶಾಸ್ತ್ರಿ ... 1932

1930. ಬೆಂಗಳೂರಿನ ತಮಾಷೆ ಬಂಗಲೆ (ಅಸಮಗ್ರ)—
ಕೆ. ಅನಂತಸ್ವಾಮಿರಾವ್ ... 1950

1930. ಮಲೆನಾಡಿನ ಚಿತ್ರಗಳು—ಕೆ. ವಿ. ಪುಟ್ಟಪ್ಪ ... 1933

1931. ಷೇಕ್ಸ್‌ಪಿಯರ್ ನಾಟಕ ಕಥೆಗಳು—
ಲಕ್ಷ್ಮೀನೃಸಿಂಹ ಶಾಸ್ತ್ರಿಗಳು ... 1933

1931. ಚೀನಾದೇಶದ ಬೌದ್ಧ ಯಾತ್ರಿಕರು—ಜಿ. ಪಿ. ರಾಜರತ್ನಂ 1932

1931. ಕೈಲಾಸವೂ ಮಾನಸ ಸರೋವರವೂ—
ಬಿ. ಎನ್. ಶ್ರೀನಿವಾಸಯ್ಯ ... 1950

ಭಾಸನ ಏಕಾಂಕ ನಾಟಕಗಳು (ಸ್ವತಂತ್ರ ಪ್ರಕಟಣೆ)—
ಎಲ್. ಗುಂಡಪ್ಪ ... 1933

1937. ಪ್ರತಿಜ್ಞಾಯೌಗಂಧರಾಯಣ—ಎಲ್. ಗುಂಡಪ್ಪ ... 1937

1938. ಚಾರುದತ್ತ—ಎಲ್. ಗುಂಡಪ್ಪ ... 1939

(ಇವುಗಳಲ್ಲಿ ಕೆಲವು ಮುಗಿದಿವೆ; ಕೆಲವನ್ನು ಬೇರೆ ಪ್ರಕಾಶಕರು ಪುನಃ ಮುದ್ರಣ ಮಾಡಿದ್ದಾರೆ.)

# ವಂದನಾರ್ಪಣೆ

ಬೆಲ್ಜಿಯಂ (Belgium) ದೇಶದ ಸುಪ್ರಸಿದ್ಧನಾದ ಕವಿಶ್ರೇಷ್ಠ ಕೌಂಟ್ ಮಾರಿಸ್ ಮ್ಯಾಟರ್‌ಲಿಂಕ್ (Count Maurice Maeterlinck) ರಚಿಸಿದ "ಮೊನ್ನ ವನ್ನ" (Monna Vanna) ಎಂಬ ನಾಟಕವನ್ನು ಮೂಲಭಾಷೆಯಿಂದ ಮಿಸ್ಟರ್ ಆಲ್‌ಫ್ರೆಡ್ ಸೂತ್ರೊ (Mr. Alfred Sutro) ಅವರು ಮಾಡಿದ ಇಂಗ್ಲಿಷ್ ಭಾಷಾಂತರವನ್ನು ನನ್ನ ಕನ್ನಡ ಅನುವಾದಕ್ಕೆ ಆಧಾರವಾಗಿ ಇಟ್ಟುಕೊಳ್ಳುವುದಕ್ಕೆ ಅನುಮತಿಯನ್ನಿತ್ತ ಮೆಸರ್ಸ್ ಜಾರ್ಜ್ ಆ್ಯಲನ್ ಮತ್ತು ಅನ್‌ವಿನ್ ಲಿಮಿಟೆಡ್ (Messrs George Allen & Unwin Limited, Publishers and Book-sellers, London) ಕಂಪೆನಿಯವರಿಗೆ ನನ್ನ ಹೃತ್ಪೂರ್ವಕವಾದ ವಂದನೆಗಳು.

ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಅಧ್ಯಾಪಕರಾದ ಶ್ರೀ ಜಿ. ಪಿ. ರಾಜರತ್ನಂ, ಎಂ.ಎ., ಅವರು ನನ್ನ ಅನುವಾದವನ್ನು ಓದಿ ತಮ್ಮ ಒಪ್ಪುಗೆಯನ್ನು ಕೊಟ್ಟು, ಜೊತೆಗೆ ಕರಡುಪ್ರತಿಯನ್ನು ತಿದ್ದಿ ನಿರ್ದೋಷವನ್ನಾಗಿ ಮಾಡಿದುದಲ್ಲದೆ ಈ ಪುಸ್ತಕಕ್ಕೆ ಕವಿಕಾವ್ಯಪರಿಚಯದ ಮುನ್ನುಡಿಯನ್ನು ಬರೆದು, ನನ್ನ ಈ ಕಾರ್ಯವನ್ನು ಸಫಲಗೊಳಿಸಲು ಸಹಾಯ ಮಾಡಿದ್ದಕ್ಕಾಗಿ ಅವರಿಗೆ ನನ್ನ ಕೃತಜ್ಞತಾಪೂರ್ವಕವಾದ ವಂದನೆಗಳು.

ಬೆಂಗಳೂರು ಸೆಂಟ್ರಲ್ ಕಾಲೇಜು ಕರ್ಣಾಟಕ ಸಂಘದ ವ್ಯವಸ್ಥಾಪಕರು ಈ ಪುಸ್ತಕವನ್ನು ಪ್ರಕಟಿಸುವ ಕಾರ್ಯವನ್ನು ವಹಿಸಿಕೊಂಡು, ತತ್ಸಂಬಂಧವಾದ ಆಯವ್ಯಯಭಾರದೊಡನೆ ಇದರ ಸರ್ವ ಹಕ್ಕುಬಾಧ್ಯತೆಗಳ ಸ್ವಾತಂತ್ರ್ಯವನ್ನು ಪಡೆದಿರುತ್ತಾರೆ. ಹೊಸ ಮಾರ್ಗಗಳನ್ನು ಅನುಸರಿಸುವ ಕನ್ನಡ ಸಾಹಿತಿಗಳಿಗೆ ಈ ಸಂಘವು ಒಂದು ಮಹದಾಶ್ರಯಸ್ಥಾನವಾಗಿದೆ. ಇತೋಪ್ಯತಿಶಯವಾಗಿ ಸಂಘದ ಈ ಕಾರ್ಯವು ಯಶಸ್ವಿಯಾಗಿಯೂ ಶಾಶ್ವತವಾಗಿಯೂ ನಡೆಯಲೆಂದು ನಾನು ಹಾರೈಸುತ್ತೇನೆ. ಈ ಸಂಘದ ವ್ಯವಸ್ಥಾಪಕರುಗಳಿಗೆ ನನಗೆ ಕೊಟ್ಟ ಉತ್ತೇಜನಕ್ಕೂ ಉದಾರಾಶ್ರಯಕ್ಕೂ ನಾನು ಚಿರಋಣಿಯಾಗಿದ್ದೇನೆ.

**ಎಸ್. ಜಿ. ಶಾಸ್ತ್ರಿ**

## ಎಸ್. ಜಿ. ಶಾಸ್ತ್ರಿ ಅವರ ಪುಸ್ತಕಗಳು

### ಆರ್ಯಕ
(ಇಬ್ಸನ್ ಕವಿಯ The Warriors at Helgeland ನಾಟಕದ ರೂಪಾಂತರ)

### ಸೂತ್ರದ ಬೊಂಬೆ
(ಇಬ್ಸನ್ ಕವಿಯ A Doll's House ನಾಟಕದ ಅನುವಾದ)

### ಸೋಕ್ರಟೀಸನ ಮರಣ
(ಹೌಸ್‌ಮನ್ ಕವಿಯ Death of Socrates ನಾಟಕದ ಅನುವಾದ)

### ಇದ್ದರೂ ಇರಬಹುದು
(ಸ್ವತಂತ್ರವಾದ ಎಂಟು ಕತೆಗಳ ಸಂಗ್ರಹ)

### ಕಣ್ಣು ಬಿಚ್ಚಾಲೆ
(ಸ್ವತಂತ್ರವಾದ ಮೂರು ಏಕಾಂಕ ನಾಟಕಗಳು)

# ಕವಿ ಕಾವ್ಯ ಪರಿಚಯ

## ೧

ಮಾರಿಸ್ ಮ್ಯಾಟರ್‌ಲಿಂಕ್ ಕವಿ (Maurice Maeterlinck) ಜನ್ಮತಃ ಬೆಲ್ಜಿಯಂ (Belgium) ದೇಶದವನಾದರೂ ಆತನ ಬರೆಹಗಳೆಲ್ಲ ಇರುವುದು ಫ್ರೆಂಚ್ ಭಾಷೆಯಲ್ಲಿ. ಮಧ್ಯಯುಗ, ಎಂದರೆ ಕ್ರಿ.ಶ. ೧೦೦೦–೧೪೦೦, ಆ ಕಾಲದಿಂದಲೂ ಬೆಲ್ಜಿಯಂ ದೇಶದ ಸಾಹಿತ್ಯವು ಎರಡು ಭಾಷಾಮುಖಗಳಲ್ಲಿ ಬೆಳೆದಿದೆ. ಉತ್ತರದ ಪ್ರಾಂತಗಳಲ್ಲೆಲ್ಲ ಡಚ್ (Dutch) ಭಾಷೆ; ದಕ್ಷಿಣದಲ್ಲಿ ಬಹುಮಟ್ಟಿಗೆ ಫ್ರೆಂಚ್, ಕೊಂಚ ಮಟ್ಟಿಗೆ ವಲ್ಲೂನ್ (Walloon). ಬಾಹ್ಯಾಕಾರದ ಭಾಷೆ ಮಾತ್ರ ಬೇರೆ ಆದರೂ ಅದರೊಳಗಿನ ಹೃದಯವಂತೂ ಬೆಲ್ಜಿಯಂ ದೇಶದ್ದೇ. ಮೊದಲು ಮೊದಲು, ನಮ್ಮ ಹಳ್ಳಿಯ ಹಾಡುಗಳು, ಬೀಸುವ ಪದಗಳು, ಗ್ರಾಮ ಲಾವಣಿಗಳು, ನೀತಿಯ ಪದಗಳು ಈ ಮಾದರಿಯಲ್ಲಿ ಆಶುಕವಿತೆಯಾಗಿ ಆರಂಭವಾದ ಬೆಲ್ಜಿಯಂ ಸಾಹಿತ್ಯ ಬರುತ್ತ ಬರುತ್ತ ಫ್ರೆಂಚ್ ಸಾಹಿತ್ಯದ ಪ್ರಭಾವಕ್ಕೆ ಒಳಗಾಯಿತು. ಹದಿನಾರನೆಯ ಶತಮಾನದಲ್ಲಿ ಕ್ರಿಶ್ಚಿಯನ್ ಮತವನ್ನು ಖಂಡಿಸುವ, ಕೊಂಡಾಡುವ ವಾದಾತ್ಮಕ ಪದ್ಯಗಳು ಹುಟ್ಟಿಕೊಂಡವು. ಹದಿನೇಳು ಹದಿನೆಂಟನೆಯ ಶತಮಾನಗಳಲ್ಲಿ ಯೂರೋಪಿನ ಸಂಪರ್ಕ ತಪ್ಪಿಹೋಗಿ, ಆರ್ಥಿಕ ಮಟ್ಟ ಇಳಿದುಹೋದದ್ದರಿಂದ ಸಾಹಿತ್ಯದ ಬೆಳವಣಿಗೆ ತಡೆಯಿತು. ಹದಿನೆಂಟನೆಯ ಶತಮಾನದಲ್ಲಿ ಪಾಂಡಿತ್ಯದ ಕೆಲಸ ತಕ್ಕಮಟ್ಟಿಗೆ ನಡೆಯಿತಾದರೂ ಸ್ವತಂತ್ರವಾದ ಸೃಷ್ಟಿ ಅಂಥದೇನೂ ಉಂಟಾಗದೆ, ಪರಸಾಹಿತ್ಯಗಳ ಅನುಕರಣ ತಕ್ಕಮಟ್ಟಿಗೆ ನಡೆಯಿತು. ಆದರೆ, ೧೮೩೦ರಲ್ಲಿ ಬೆಲ್ಜಿಯಂ ತಾನು ಸ್ವತಂತ್ರವಾದ ದೇಶವಾದಾಗ ಅದರ ಸಾಹಿತ್ಯ ಸೂರ್ಯನ ಉದಯವಾಯಿತು. ಅಂದಿನಿಂದ ಅದರ ಬರೆಹಗಳಲ್ಲಿ ಆ ರಾಷ್ಟ್ರ ಚೇತನದ ಲಕ್ಷಣಗಳು ವ್ಯಕ್ತವಾಗತೊಡಗಿದುವು. ಹೀಗೆ ಆರಂಭವಾದ ಬೆಲ್ಜಿಯಂ ಸಾಹಿತ್ಯದಲ್ಲಿ ಹತ್ತೊಂಬತ್ತನೆಯ ಶತಮಾನದ ಕೊನೆಯ ಭಾಗದ ವೇಳೆಗೆ ವಿಶ್ವವಿಖ್ಯಾತಿಯನ್ನು ಪಡೆದವರು ಇಬ್ಬರು, ಫ್ಲಾಂಡರ್ಸ್ ಪ್ರಾಂತದಲ್ಲಿ

ಹುಟ್ಟಿದವರಾದರೂ ಫ್ರೆಂಚ್ ಭಾಷೆಯಲ್ಲಿ ಬರೆದವರು: ಮಾರಿಸ್ ಮ್ಯಾಟರ್ ಲಿಂಕ್ (1862—1949) ಮತ್ತು ಎಮೀಲ್ ವರ್‌ಹ್ಯಾರನ್ (Emile Verhaeren. 1855—1916.)

ಮಾರಿಸ್ ಮ್ಯಾಟರ್‌ಲಿಂಕ್ ಘೆಂಟ್ (Ghent) ನಗರದಲ್ಲಿ 1862ನೇ ಇಸವಿ ಆಗಸ್ಟ್ ತಿಂಗಳಿನ 29ನೇ ತಾರೀಕು ಜನಿಸಿದನು. ವಿದ್ಯಾರ್ಥಿಯಾಗಿ ಸೈಂಟ್ ಬರ್ಬಾ ಕಾಲೇಜಿನಲ್ಲಿರುವಾಗಲೇ ಒಂದು ಸಣ್ಣ ಸಾಹಿತಿಗಳ ಸಂಘ ವನ್ನು ಪ್ರವರ್ತಿಸಿದ್ದನು. ನ್ಯಾಯವಾದಿಯಾಗಿದ್ದ ತನ್ನ ತಂದೆಯ ಇಷ್ಟದಂತೆ ತಾನೂ ನ್ಯಾಯವಾದಿತ್ವಕ್ಕೆ ಓದಿ ಬ್ಯಾರಿಸ್ಟರ್ ಆದರೂ ಆತನ ಒಲವು ಸಾಹಿತ್ಯದ ಕಡೆಗೇ ಹೆಚ್ಚಾಗಿತ್ತು. 1886ರಲ್ಲಿ ಹೆಚ್ಚಿನ ನ್ಯಾಯಾಂಗಗಳನ್ನು ಕಲಿಯಬೇಕೆಂಬ ಉದ್ದೇಶದಿಂದ ಪ್ಯಾರಿಸ್ಸಿಗೆ ಹೋದನು; ಅಲ್ಲಿ Villiers de l'Isle-Adam, Catulle Mendés, Saint Paul Roux ಮುಂತಾದ ಪ್ರಸಿದ್ಧ ಸಾಹಿತಿಗಳ ಸಂಪರ್ಕವಾಗಿ ಅವರ ಪ್ರಭಾವಕ್ಕೆ ಒಳಗಾದನು. ಅಲ್ಲಿರು ವಾಗಲೇ La Pléïade ಎಂಬ ಪತ್ರಿಕೆಯನ್ನು ಸ್ಥಾಪಿಸಿದನು. ಅದು ಆರು ಸಂಚಿಕೆಗಳ ಕಾಲ ಮಾತ್ರ ಜೀವಿಸಿದರೂ ಆತನ ಮೊತ್ತಮೊದಲಿನ ಕತೆಗಳೂ ಕವನಗಳೂ ಅದರಲ್ಲೆ ಪ್ರಕಟವಾದುವು. ವ್ಯಾಸಂಗವನ್ನು ಮುಗಿಸಿ 1887ರಲ್ಲಿ ಘೆಂಟಿಗೆ ಹಿಂದಿರುಗಿ, ನ್ಯಾಯವಾದಿಯ ವೃತ್ತಿಯನ್ನು ಹಿಡಿದರೂ 1889ರ ವೇಳೆಗೆ ಆ ವೃತ್ತಿಗೆ ಕೈಮುಗಿದುಬಿಟ್ಟನು. ಇದರಿಂದ ನ್ಯಾಯಾಂಗಕ್ಕೆ ಏನು ನಷ್ಟವಾಯಿತೋ, ಕಾವ್ಯಾಂಗಕ್ಕಂತೂ ಅಪಾರವಾದ ಲಾಭ ದೊರಕಿತು.

ಅದೇ ವರ್ಷ ಆತನ Serres Chaudes ಎಂಬ ಒಂದು ಕವನ ಸಂಗ್ರಹ ಪ್ರಕಟವಾಯಿತಾದರೂ 1890ರಲ್ಲಿ La Princesse Maleine ಎಂಬ ನಾಟಕ ಪ್ರಕಟವಾಗುವ ವರೆಗೆ ಯಾರ ಲಕ್ಷ್ಯವೂ ಆತನ ಮೇಲೆ ಬೀಳಲಿಲ್ಲ. ಇದು ಬಂದೊಡನೆ ಆತನನ್ನು "ಫ್ಲೆಮಿಷ್ ಷೇಕ್ಸ್‌ಪಿಯರ್" ಎಂದು ಕೊಂಡಾ ಡಿದರು. ಇದರ ಬೆನ್ನಿನಲ್ಲೆ Les Aveugles 1890, L' Intruse, 1891, Pelléas et Mélisande, 1892, Alladine et Palomides, 1892, Aglavaine et Sélysette, 1896—ಎಂಬ ನಾಟಕಗಳು ಬಂದುವು. ಇದೇ 1896ರಲ್ಲಿ ಆತನ ಕಿರುಪ್ರಬಂಧಗಳ ಸಂಗ್ರಹ ಪ್ರಕಟವಾಯಿತು—Le Trésor des Humbles ಎಂಬ ಹೆಸರಿನಿಂದ. ಎರಡು ವರ್ಷದ ಮೇಲೆ

La Sagesse et la Destinée ಎಂಬ ಮಹಾಪ್ರಬಂಧ ಪ್ರಕಟ ವಾಯಿತು.

1896ರಲ್ಲಿ ಘೆಂಟ್ ನಗರವನ್ನು ಬಿಟ್ಟು ಪ್ಯಾರಿಸ್ಸಿಗೆ ಹೋದವನು, ಅನಂತರ ಗ್ರಾಸ್ಸ್ (Grasse)ನಲ್ಲಿ ನೆಲಸಿದನು. ನಾರ್ಮಂಡಿಯ ಆಕರ್ಷಣೆಗೆ ಒಳಗಾಗಿ ಅಲ್ಲೊಂದು ದೊಡ್ಡ ಬಂಗಲೆಯನ್ನು ಕೊಂಡು, ಅದರ ಜೀರ್ಣೋದ್ಧಾರಮಾಡಿದನು. ಅಲ್ಲಿ, ತನ್ನ ನಾಟಕಗಳನ್ನು ವಿಶದಪಡಿಸುತ್ತಿದ್ದ ಜಾರ್ಜೆಟ್ ಲೆಬ್ಲಾಂಕ್ ಎಂಬ ಜೊತೆಗಾತಿಯೊಡನೆ ಅನೇಕ ವರ್ಷಗಳಿದ್ದನು.

1901ರಲ್ಲಿ Ariane et Barbe Bleue ಮತ್ತು Soeur Béatrice ಎಂಬ ನಾಟಕಗಳೂ 1902ರಲ್ಲಿ Monna Vanna ನಾಟಕವೂ ಆಯಿತು. ಅದೇ ವರ್ಷ Le Temple Enseveli ಎಂಬ ಪ್ರಬಂಧಸಂಗ್ರಹ ಬಂತು. 1903ರಲ್ಲಿ Joyzelle ಎಂಬ ನಾಟಕ, 1904 ರಲ್ಲಿ Le Double Jardin ಎಂಬ ಪ್ರಬಂಧಸಂಗ್ರಹ, 1907ರಲ್ಲಿ L' Intelligence des Fleurs ಎಂಬ ಇನ್ನೊಂದು ಪ್ರಬಂಧಸಂಗ್ರಹ ಬಂದುವು. ಎರಡು ವರ್ಷದ ನಂತರ ಆತನ ಮಹಾಕೃತಿ ಎಂದು ಹೆಸರಾದ L' Oiseau Bleu ಎಂಬ ಹೊಸರೀತಿಯ ನಾಟಕ ಬಂತು. 1910ರಲ್ಲಿ ತನ್ನ ಪತ್ನಿಗೋಸ್ಕರ ಷೇಕ್ಸ್ ಪಿಯರ್‌ನ ಮ್ಯಾಕ್‌ಬೆತ್ ನಾಟಕವನ್ನು ಅನುವಾದ ಮಾಡಿದನು. 1913ರಲ್ಲಿ ಆತನದೆ Marie Magdeleine ಎಂಬ ನಾಟಕ ಬಂತು.

ಆ ವೇಳೆಗೆ ಮೊದಲನೆಯ ಮಹಾಯುದ್ಧ ತಲೆದೋರಿತು. ಆ ಕಾಲಕ್ಕೆ ಬೆಲ್ಜಿಯಂ ಜರ್ಮನರ ಆಕ್ರಮಣಕ್ಕೆ ಒಳಗಾಗಿತ್ತು. ಆಗ ಮ್ಯಾಟರ್‌ಲಿಂಕ್ ತನ್ನ ದೇಶದ ಪರವಾಗಿ ಸ್ಪೇಯ್ನ್ ಮತ್ತು ಇಟಲಿ ದೇಶಗಳಲ್ಲಿ ಪ್ರಚಾರ ಮಾಡುತ್ತ ತಿರುಗಾಡಿದನು. ಆಗ ಆತನಿಗೆ ಐವತ್ತೆರಡು ವರ್ಷ ವಯಸ್ಸು.

"Academie de Langue et de Literature francaises de Belgique" ಎಂಬ ಸಂಸ್ಥೆ ನಾಟಕಸಾಹಿತ್ಯಕ್ಕೆ ಮೂರು ವರ್ಷಗಳಿಗೊಮ್ಮೆ ಬಹುಮಾನ ಮಾಡುವುದು; ಮ್ಯಾಟರ್‌ಲಿಂಕ್ ಈ ಬಹುಮತಿಯನ್ನು 1902ರಲ್ಲಿ, 1911ರಲ್ಲಿ, ಎರಡು ಸಲ ಪಡೆದನು. ಅದೇ 1911ರಲ್ಲಿ ಆತನಿಗೆ ಸಾಹಿತ್ಯಸೃಷ್ಟಿಗಾಗಿ ನೋಬೆಲ್ ಪಾರಿತೋಷಕ (Noble Prize) ದೊರಕಿತು. 1922 ರಲ್ಲಿ ಆತನ ಅರವತ್ತನೆಯ ಹುಟ್ಟಿದ ಹಬ್ಬದ ದಿವಸ ಆತನಿಗೆ ಕೌಂಟ್

(Count) ಎಂಬ ಗೌರವ ಲಭಿಸಿತು. ಐದು ವರ್ಷಗಳನಂತರ ಆತನನ್ನು The Academy of Moral and Political Sciences in Paris ಎಂಬ ಸಂಸ್ಥೆ ತನ್ನ ಸದಸ್ಯನನ್ನಾಗಿ ವರಿಸಿಕೊಂಡಿತು.

ಎರಡನೆಯ ಮಹಾಯುದ್ಧ ಆರಂಭವಾದಾಗ ಮ್ಯಾಟರ್‌ಲಿಂಕ್ ಸಂಯುಕ್ತ ಸಂಸ್ಥಾನಗಳಲ್ಲಿ ಆಶ್ರಯ ಹೊಂದಿ, ಏಳು ವರ್ಷಗಳ ಕಾಲ ತನ್ನಿಂದ ತಾನೆ ದೇಶಭ್ರಷ್ಟನಾಗಿ ನ್ಯೂಯಾರ್ಕ್ ನಗರದಲ್ಲಿ ವಾಸಿಸಿದನು. 1947ರಲ್ಲಿ ಇಟಲಿಗೂ ಫ್ರಾನ್ಸಿಗೂ ಮಧ್ಯದ ಗಡಿಯಲ್ಲಿರುವ ನೀಸ್ (Nice) ನಗರಕ್ಕೆ ಹಿಂದಿರುಗಿದನು. ದೇಶಕ್ಕೆ ಹಿಂದಿರುಗಿದ ಮಹಾಕವಿಯನ್ನು Maison des Escrivains ಎಂಬ ಬರೆಹಗಾರರ ಗೋಷ್ಠಿಯು ಬ್ರಸಲ್ಸ್ ನಗರದಲ್ಲಿ ಡಿಸೆಂಬರ್ ಹನ್ನೆರಡನೆಯ ತಾರೀಕು ಸತ್ಕರಿಸಿ ಗೌರವಿಸಿತು.

ಆದರೆ, ಮೆಡಿಟೆರೇನಿಯನ್ ಸಮುದ್ರದ ದಡದಲ್ಲಿದ್ದ ತನ್ನ ಸ್ವಂತ ಮನೆಯಲ್ಲಿ ವಾಸಿಸುವುದು ಆತನಿಗೆ ಸಾಧ್ಯವಾಗದೆ ಹೋಯಿತು. ಆತನ ಮಹಲನ್ನು ಆಕ್ರಮಿಸಿಕೊಂಡಿದ್ದ ಜರ್ಮನರು ಅದನ್ನು ಕುಲಗೆಡಿಸಿ ವಾಸಕ್ಕೆ ಅನರ್ಹವಾಗಿ ಮಾಡಿದ್ದರು, ಅದನ್ನು ಸರಿಪಡಿಸುವುದು ಅಸಾಧ್ಯವಾಗಿತ್ತು. ಅದೇ 1947ರಲ್ಲಿ, ಆಗಸ್ಟ್ 29, ಮ್ಯಾಟರ್‌ಲಿಂಕ್, ಬೆಲ್ಜಿಯಂ ದೇಶದ ಬ್ರಸಲ್ಸ್ ನಗರದಲ್ಲಿ, Eugene Bais ಎಂಬ ತನ್ನ ಸ್ನೇಹಿತನ ಮನೆಯಲ್ಲಿ, ತನ್ನ 85ನೆಯ ಹುಟ್ಟಿದ ದಿನವನ್ನು ಕಳೆದನು.

ಬೆಲ್ಜಿಯಂ ದೇಶದ ರಾಷ್ಟ್ರೀಯಸಾಹಿತ್ಯಲೋಕದಲ್ಲಿ ಉತ್ತಮೋತ್ತಮರಾದ ಅತ್ಯುದಾತ್ತ ವ್ಯಕ್ತಿಗಳಲ್ಲಿ ಮ್ಯಾಟರ್‌ಲಿಂಕ್ ಒಬ್ಬನು. ಪದ್ಯಕಾವ್ಯ, ನಾಟಕಸಾಹಿತ್ಯ, ತತ್ತ್ವಚಿಂತನೆಯ ಪ್ರಬಂಧಗಳು, ಅತ್ಯುಚ್ಚವಾದ ವೈಜ್ಞಾನಿಕ ವಿಚಾರಗಳು ಇವುಗಳನ್ನೊಳಗೊಂಡ ದೊಡ್ಡ ಸಾಹಿತ್ಯದ ಸಮುದಾಯವನ್ನು ತನ್ನ ದೇಶಕ್ಕೆ ಕೊಟ್ಟುಹೋದನು.

ಬೆಲ್ಜಿಯಂ ದೇಶದ ಭಾಷಾಸಾಹಿತ್ಯಗಳ ಪುನರುತ್ಥಾನಕ್ಕಾಗಿ 1880 ಆದ ಮೇಲೆ ಮಹಾಪ್ರಯತ್ನ ಮಾಡಿದವರಲ್ಲಿ ಈತನೇ ಕಡೆಯವನು. ಬರೆವಣಿಗೆಯಲ್ಲಿ ಸ್ವಪ್ರತಿಭೆಯ ಅಂಕಿತವನ್ನು ಮೆರೆಯುವುದರಲ್ಲಿ ತನ್ನ ಸಮಕಾಲೀನರ ನಡುವೆ ಈತನೇ ಮೊದಲನೆಯವನು. ತನ್ನ Princesse Maleine ಎಂಬ ನಾಟಕವನ್ನು ಬರೆದು ಈತನು ಪ್ರಸಿದ್ಧಿಗೆ ಬಂದಾಗ ಕೇವಲ

ಇಪ್ಪತ್ತೆಂಟು ವರ್ಷ. ಈತನ ನಾಟಕಗಳು ರಂಗಭೂಮಿಯಲ್ಲಿ ಮೇಲಿಂದ ಮೇಲೆ ಪ್ರದರ್ಶಿತವಾದುವು. ಮನುಷ್ಯನ ಹೃದಯರಂಗದಲ್ಲಿ ಗುಪ್ತಗೋಚರ ವಾಗಿ ಪ್ರತಿಕ್ಷಣವೂ ನಡೆಯುವ ನಾಟಕಕ್ಕೆ ಒಂದು ಮೂರ್ತಸ್ವರೂಪವನ್ನು ಮ್ಯಾಟರ್‌ಲಿಂಕ್ ತನ್ನ ನಾಟಕಗಳಲ್ಲಿ ಕೊಟ್ಟನು, ಮನುಷ್ಯ ಜೀವನದ ಮೇಲೆ ಆ ಅದೃಷ್ಟಶಕ್ತಿಯ ಹಿಡಿತ ಎಷ್ಟು ಮಟ್ಟಿಗಿರುವುದೆಂದು ಈತನ ನಾಟಕದ ನಾಯಕ ನಾಯಕಿಯರು ಕಂಡುಕೊಳ್ಳಲು ಪ್ರಯತ್ನಿಸುತ್ತಾರೆ. ಈತನ ಪ್ರಬಂಧಗಳಾದರೋ ಮಾನವನ ಆಶೆ ಆಕಾಂಕ್ಷೆಗಳ ಉತ್ತಮೋತ್ತಮ ಚಿತ್ರ ಗಳನ್ನು ಒಳಕೊಂಡಿರುತ್ತವೆ.

ನಮ್ಮ ಜೀವನವನ್ನು ಉತ್ತಮಗೊಳಿಸುವುದಕ್ಕೆ ಬೇಕಾದ ನಿಯಮ ಗಳನ್ನು ನಮ್ಮ ಒಳಗೆಯಾಗಲಿ ನಮ್ಮ ಹೊರಗಿನ ಜಗತ್ತಿನಲ್ಲಾಗಲಿ ನಾವು ಕುರಿತು ಕಂಡುಕೊಳ್ಳುವುದು ಆಗದೆ ಹೋದರೆ, ಪ್ರಕೃತಿಯನ್ನಾದರೂ ನೋಡಿ, ಭವಿತವ್ಯವನ್ನು ಅನುಭವಿಸಿ ತೀರುವೆವೆಂಬ ಪಾಠವನ್ನು ಇಷ್ಟು ಕಲಿಯಬಹು ದಲ್ಲ? ಮಾನವಸಮಾಜಗಳು ಯಾವುವೂ ಪರಿಪೂರ್ಣವಾದವುಗಳಲ್ಲವಾದರೂ ನಮ್ಮ ಕಣ್ಣೆದುರಿಗೇ ಕೆಲವು ಪ್ರಾಣಿಸಮಾಜಗಳು ಉಂಟಲ್ಲವೆ? ಅವು ನಮ ಗಿಂತ ಪ್ರಾಚೀನವಾದುವು; ತಮ್ಮ ಸುವ್ಯವಸ್ಥಿತ ಸಾಮಾಜಿಕ ಜೀವನಕ್ಕೆ ಬೇಕಾದ, ತಮ್ಮ ಅನುಕೂಲಕ್ಕೆ ಒದಗುವ ನಿಯಮಗಳನ್ನು ಕಂಡುಕೊಂಡಿವೆ. ಅವುಗಳಿಂದ ನಾವು ಪಾಠ ಕಲಿಯಬಾರದೆ? ಹೀಗೆಂದುಕೊಂಡು ಮ್ಯಾಟರ್ ಲಿಂಕ್ 1901ರಲ್ಲಿ La Vie des Abeilles ಎಂದು ಜೇನುಹುಳುಗಳ ಜೀವನ ವನ್ನು ಕುರಿತ ಪುಸ್ತಕವೊಂದನ್ನು ಬರೆದು ಪ್ರಕಟಿಸಿದನು. ಇದೇ ಪ್ರಸ್ಥಾನ ದಿಂದ ಬರೆದವು: ಇರುವೆಗಳನ್ನು ಕುರಿತ La Vie des Fourmis, ಗೆದ್ದಲು ಜಾತಿಯ ಹುಳುಗಳನ್ನು ಕುರಿತ La Vie des Termites, ಮತ್ತು ಹೂವು ಗಳನ್ನು ಕುರಿತ L' Intelligence des Fleurs. ಇಲ್ಲಿಂದ ಆರಂಭ, ಮ್ಯಾಟರ್‌ಲಿಂಕಿನ ವಿಶಿಷ್ಟವಾದ ಪ್ರತಿಭೆಯ ವಿಕಾಸ. ಇಲ್ಲಿಂದ ಮೇಲು ಮುಖವಾದದ್ದು, ತನ್ನ ತುತ್ತತುದಿಯನ್ನು ಮುಟ್ಟುತ್ತದೆ, ಆತನ L' Oiseu Bleu ಅಥವಾ 'ನೀಲಿಯ ಹಕ್ಕಿ' ಎಂಬ ನಾಟಕದಲ್ಲಿ.

ಆತನ ಕಡೆಕಡೆಯ ಪುಸ್ತಕಗಳಲ್ಲಂತೂ ತತ್ತ್ವಚಿಂತನೆಯೇ ತುಂಬಿ ಹೋಯಿತು. ಸೃಷ್ಟಿಯ ರಹಸ್ಯಗಳನ್ನು ಕುರಿತು ಆತನ ಶೋಧನೆಗಳನ್ನು ಒಳ

ಕೊಂಡ ಪ್ರಬಂಧಮಾಲೆಗಳು ಪ್ರಕಟವಾದುವು. ಹುಟ್ಟುಸಾವುಗಳ ಸಂಗತಿಯಲ್ಲಿ ಆತನ ವಿಚಾರ ಆಸಕ್ತವಾಗಿತ್ತು. ಎರಡನೆಯ ಮಹಾಯುದ್ಧ ಮುಗಿಯುವ ವರೆಗೂ ಆತನು ಕಣ್ಣೆದುರಿನ ಘೋರ ಸಮಸ್ಯೆಗಳಿಗೆ ಪರಿಹಾರವನ್ನು ಪರ್ಯಾಲೋಚಿಸುತ್ತ, ಸುಖಶಾಂತಿಗಳಿಗೆ ಮಾರ್ಗವಾವುದೆಂಬ ಅನ್ವೇಷಣೆಯಲ್ಲಿದ್ದನು.

ಮಾರಿಸ್ ಮ್ಯಾಟರ್‌ಲಿಂಕ್ 1949ರ ಮೇ 6ನೇ ತಾರೀಕು ನೀಸ್ ನಗರದ ಬಳಿಯ ತನ್ನ ಸ್ವಗೃಹದಲ್ಲಿ ಕಾಲವಾದನು. ರಾತ್ರಿ ಸುಮಾರು 9 ಗಂಟೆಯ ವೇಳೆಗೆ ಹೃದಯದ ರೋಗ ಕಾಣಿಸಿಕೊಂಡಿತಂತೆ, ಉತ್ತಮ ವೈದ್ಯ ಸಹಾಯ ಒದಗಿದರೂ ಏನೂ ಫಲವಾಗದೆ ಮಧ್ಯರಾತ್ರಿಯಾದ ಮೂವತ್ತು ನಿಮಿಷಗಳಲ್ಲಿ ಆತನ ಪ್ರಾಣ ಹೋಯಿತಂತೆ. ಆ ರಾತ್ರೆ ಜೋರಾಗಿ ಮಳೆ ಗಾಳಿಗಳಂತೆ, ಆತನ ಜೀವನದ ಅನುಭವಗಳ ಸಂಕೇತವಾಗಿ.

ಮ್ಯಾಟರ್‌ಲಿಂಕ್ ಮಹಾಕವಿ. ಆತನ ಪ್ರತಿಭೆ ಸತ್ಯದ ಅನೇಕ ಮುಖಗಳನ್ನು ಕಂಡಿತು, ಕಂಡದ್ದನ್ನು ಆತ ತನ್ನ ಕೃತಿಗಳ ರೂಪದಲ್ಲಿ* ಕೊಟ್ಟು ಹೋಗಿದ್ದಾನೆ.

## ೨

ಮ್ಯಾಟರ್‌ಲಿಂಕನ ಕೃತಿಗಳಲ್ಲಿ, ಆತನ 'ಮೊನ್ನ ವನ್ನ'ವನ್ನು ಕುರಿತು ಜನ ಆಡಿಕೊಂಡಂತೆ ಬೇರಾವುದನ್ನೂ ಕುರಿತಾಡಲಿಲ್ಲ. ಇಂಗ್ಲೆಂಡಿನಲ್ಲಿ ಈ ನಾಟಕ ಪ್ರಕಟವಾಗಿ, ಅದನ್ನು ಆಡಬೇಕೆಂದಾಗ, ಅಲ್ಲಿ ಇದನ್ನು ಆಡಬಹುದು ಇದನ್ನು ಆಡಬಾರದು ಎಂದು ನಿರ್ಣಯಿಸುವ Censor ಎಂಬ ಅಧಿಕಾರಿಗಳು ಇದರ ಪ್ರದರ್ಶನವನ್ನು ನಿಷೇಧಿಸಿದ್ದರು. ಆಗ ಈ ನಿಷೇಧವನ್ನು ಪ್ರತಿಭಟಿಸಿ,

---

* The Treasure of the Humble, Wisdom and Destiny, The Buried Temple, Life of The Bee, The Double Garden, Life and Flowers, The Life of the white Ant, Our Eternity, On Death, The Wrack of the Storm, Old-fashioned Flowers, My Dog, ಎಂಬ ಪ್ರಬಂಧಗಳು; Aglavaine and Selysette, Monna Vanna, Joyzelle, Blue Bird, Princess Maleine, Palleas and Melisande, Mary Magadalene, Three Plays (Alladine and Palomides, Interior, The Death of Tintagiles), Sister Beatrice, Ardiane and Barbe Blue ಎಂಬ ನಾಟಕಗಳು.

ಜಾರ್ಜ್ ಮೆರಿಡಿತ್, ಥಾಮಸ್ ಹಾರ್ಡಿ, ರಡ್ಯಾರ್ಡ್ ಕಿಪ್ಲಿಂಗ್, ಮಾರಿಸ್ ಹ್ಯೂಲೆಟ್, ಎಡ್ಮಂಡ್ ಗಾಸ್, ಆರ್ಥರ್ ಸಿಮನ್ಸ್ ಮುಂತಾದ ಹನ್ನೆರಡು ಜನ ಸುಪ್ರಸಿದ್ಧ ಬರೆಹಗಾರರು ಮನವಿಮಾಡಿಕೊಂಡರು. ಹನ್ನೊಂದು ವರ್ಷ ಗಳಾದ ಮೇಲೆ, ಆ ನಿಷೇಧವನ್ನು ತೆಗೆದರು, ನಾಟಕ ನಡೆಯಿತು.

"ಮೊನ್ನ ವನ್ನ" ಹದಿನೈದನೆಯ ಶತಮಾನದ ಫ್ಲಾರೆನ್ಸ್ ನಗರಕ್ಕೆ ಸಂಬಂಧಿಸಿದ ಕಥೆ. ಇದರಲ್ಲಿ ಚರಿತ್ರೆಯ ನಿಜಾಂಶ ಎಷ್ಟು ಇರಬಹುದೋ ಹೇಗೋ, ಅಂತೂ ಆಗಿನ ಕಾಲದ ವರ್ತನೆಗಳನ್ನು ಚೆನ್ನಾಗಿ ಚಿತ್ರಿಸುತ್ತದಂತೆ.

ಬ್ರೌನಿಂಗ್ ಕವಿ ಬರೆದಿರುವ ಲ್ಯೂರಿಯಾ (Luria) ಎಂಬ ಖಂಡ ಕಾವ್ಯವು ಈ ನಾಟಕಕ್ಕೆ ಪ್ರೇರಣೆಯನ್ನು ಒದಗಿಸಿತೆಂದು ಹೇಳುತ್ತಾರೆ.

ಇದು ಮೂರು ಅಂಕಗಳ ನಾಟಕ, ಎರಡು ರಾಜ್ಯಗಳಿಗೆ ಸಂಬಂಧಿಸಿದ ನಾಟಕ, ನಾಲ್ಕು ವ್ಯಕ್ತಿಗಳಿಗೆ ಹೊಂದಿಕೊಂಡ ನಾಟಕ, ಒಂದು ಧರ್ಮ ಸಂಕಟವನ್ನು ಚಿತ್ರಿಸುವ ನಾಟಕ.

ನಾಟಕ ಆರಂಭವಾಗುವ ವೇಳೆಗೆ ಪೀಸಾ ಮತ್ತು ಫ್ಲಾರೆನ್ಸ್ ಇವುಗಳಿಗೆ ಯುದ್ಧ ತೊಡಗಿ ಮೂರು ತಿಂಗಳಾಗಿದೆ. ಈ ಮುತ್ತಿಗೆಯಲ್ಲಿ ಪೀಸಾ ತುಂಬ ಏಟು ತಿಂದಿದೆ, ಕೋಟೆಯ ಗೋಡೆ ಶಿಥಿಲವಾಗಿದೆ, ಶಸ್ತ್ರಾಸ್ತ್ರಗಳೆಲ್ಲ ಮುಗಿದು ಹೋಗಿದೆ, ಊರಲ್ಲಿ ಜನ ಅನ್ನಾಹಾರಗಳಿಲ್ಲದೆ ಸೊರಗಿದ್ದಾರೆ. ಪೀಸಾ ನಗರದ ಸೈನ್ಯಾಧಿಕಾರಿಯಾದ ಗ್ವೀಡೊ ಕೊಲೊನ್ನ (Guido Colonna) ತನ್ನ ತಂದೆಯಾದ ಮಾರ್ಕೊ ಕೊಲೊನ್ನ (Marco Colonna)ನನ್ನು ಮುತ್ತಿಗೆ ಹಾಕಿರುವ ಫ್ಲಾರೆನ್ಸಿನ ಸೇನಾಪತಿ ಪ್ರಿನ್ಸಿವಲ್ಲೆ (Prinzivalle)ಯ ಬಳಿಗೆ ಸಂಧಾನಕ್ಕಾಗಿ ಕಳಿಸಿದ್ದಾನೆ.

ಸಂಧಾನ ಏನಾಗುವುದೋ, ಪೀಸಾದ ಜನರ ಗತಿ ಹೇಗೋ ಎಂದು ಸೇನಾನಾಯಕನ ಕಳವಳದಿಂದ ನಾಟಕ ಆರಂಭವಾಗುತ್ತದೆ. ಕ್ಷಿಪ್ರದಲ್ಲಿಯೇ ಮಾರ್ಕೊ ಕೊಲೊನ್ನ ಶತ್ರುಪಾಳಯದಿಂದ ಕಾಲೆಳೆದುಕೊಂಡು ಬರುತ್ತಾನೆ. ಪ್ರಿನ್ಸಿವಲ್ಲೆಯೊಡನೆ ಸಂಧಾನ ನಡಸಿದ್ದಾನೆ. ಅವನಾದರೂ ಮುತ್ತಿಗೆಯನ್ನು ತೆಗೆದು, ಪೀಸಾಗೆ ಬೇಕಾದ ಅನ್ನಾಹಾರಗಳನ್ನೂ ಶಸ್ತ್ರಾಸ್ತ್ರಗಳನ್ನೂ ಒದಗಿಸಲು ಒಪ್ಪಿದ್ದಾನೆ. ಬೇಕಾದರೆ, ತಾನು ಫ್ಲಾರೆನ್ಸಿನ ಪಕ್ಷವನ್ನು ಬಿಟ್ಟು

ಪೀಸಾಕ್ಕೆ ಸಹಾಯಮಾಡಲೂ ಸಿದ್ಧ. ಈ ದ್ರೋಹಾಚರಣೆಗಾದರೂ ಕಾರಣ ವಿಲ್ಲದೆ ಇಲ್ಲ. ಫ್ಲಾರೆನ್ಸ್ ಅವನಿಗೆ ಗುಪ್ತವಾಗಿ ದ್ರೋಹವನ್ನು ಬಗೆಯುತ್ತಿದೆ. ಈ ಮುತ್ತಿಗೆಯಲ್ಲಿ ಅವನಿಗೆ ಜಯವಾದ ಕೂಡಲೆ ಅವನನ್ನು ಅಧಿಕಾರದಿಂದ ಚ್ಯುತಿಮಾಡಿಸಬೇಕೆಂದು ಹವಣಿಸುತ್ತಿದೆ. ಅದರಿಂದ ಅವನು ಪೀಸಾಕ್ಕೆ ನೆರ ವಾಗಲು ಒಪ್ಪಿದ್ದಾನೆ.

ಆದರೆ, ಅವನು ನೀಡಿರುವ ಸಂಧಾನದ ಷರತ್ತು, ಪ್ರಸ್ತಾಪಿಸಬೇಕೆಂದರೆ ಬಾಯಿ ಕಟ್ಟಿಹೋಗುವಂತಹದು. ಆ ಷರತ್ತಿನಿಂದ ಪೀಸಾದ ಪ್ರಜಾವರ್ಗಕ್ಕೆ ಕ್ಷೇಮವಾಗುವುದಾದರೂ ಅದನ್ನು ಮಾರ್ಕೊ ಬಾಯಿಬಿಟ್ಟು ಕೂಡಲೆ ಹೇಳ ಲಾರ. ಬೇರೆ ಯಾವುದು ಯಾವುದೋ ಮಾತುಗಳನ್ನು ಹೇಳಿ ಮಾತು ಮರೆಸುತ್ತ, ಪ್ರಿನ್ಸಿವಲ್ಲೆಯ ಗುಣಶೀಲಗಳನ್ನು ಹೊಗಳಿ ವರ್ಣಿಸುತ್ತ, ಹೇಳ ಬಾರದ್ದನ್ನು ಹೇಳಲು ಯತ್ನಿಸುತ್ತಾನೆ. ಆದರೆ ಈಗಲ್ಲದಿದ್ದರೂ ಇನ್ನು ಕೊಂಚ ಹೊತ್ತಿಗಾದರೂ ಹೇಳಲೆಬೇಕಲ್ಲ? ಪ್ರಿನ್ಸಿವಲ್ಲೆ, ಮುತ್ತಿಗೆ ಹಾಕಿದ ಸೇನಾಧಿ ಪತಿ, ಹೇಳಿ ಕಳಿಸಿದ್ದಾನೆ: ಪೀಸಾದ ಸೇನಾಧಿಪತಿಯ ಪತ್ನಿಯಾದ ಮೊನ್ನ ವನ್ನ, ಆಕೆ ಆ ರಾತ್ರೆ ಏಕಾಕಿಯಾಗಿ ಏಕವಸ್ತ್ರ*ಳಾಗಿ ತನ್ನ ಪಾಳೆಯಕ್ಕೆ ಬಂದರೆ, ಅಲ್ಲಿ ಆ ರಾತ್ರೆ ಇದ್ದರೆ, ಪೀಸಾ ಚೇತರಿಸಿಕೊಂಡು ತಲೆಯೆತ್ತಲು ಬೇಕಾಗುವ ಸರ್ವ ಸಹಾಯವನ್ನು ತಾನು ಒದಗಿಸುವನಂತೆ! ಯಾವುದೇ ಸಭ್ಯಸಮಾಜದ ಮನಸ್ಸಿಗಾದರೂ ಅಸಹ್ಯವನ್ನುಂಟುಮಾಡುವ, ನಿರ್ಮಲವಾದ ಪವಿತ್ರ ದಾಂಪತ್ಯಧರ್ಮಕ್ಕೆ ಕುಠಾರಪ್ರಾಯವಾದ ಇಂಥ ಬೇಡಿಕೆಯನ್ನು ಯಾವಾತ ಬಾಯಿಯಿಂದ ನುಡಿದಾನು? ಆದರೂ ಕೇಳುವವನು ಕೇಳಿದ್ದಾನೆ; ಅದನ್ನು ಹೇಳಲು ಹಿಂದೆಗೆದರೆ, ನಗರದ ಕ್ಷೇಮಕ್ಕಿರುವ ಒಂದೇ ಒಂದು ಮಾರ್ಗ ಅದೂ ಮುಚ್ಚಿಹೋಗುವುದು.

ಮಾವನಾದವನು ತನ್ನ ಸೊಸೆಯನ್ನು ಕುರಿತ ಇಂಥ ಮಾತನ್ನು ಅವಳ ಗಂಡನ ಹತ್ತಿರ ಯಾವ ಮುಖದಿಂದ—ಬಿಡಿಸಿ ಹೇಳಿ ಒಪ್ಪಿಸುವುದು ಹಾಗಿರಲಿ —ಸೂಚಿಸಿಯಾನು? ಆದರೆ ಈ ಮಾವ ವಯೋವೃದ್ಧ, ಜ್ಞಾನವೃದ್ಧ.

---

* ಇದನ್ನು ಮ್ಯಾಂಟ್ಲ್ (Mantle) ಎನ್ನುತ್ತಾರೆ. ಇದು ತೋಳುಗಳಿಲ್ಲದ ನಿಲು ವಂಗಿಯ ಹಾಗಿರುತ್ತದೆ. ತಲೆಯ ಮೇಲೆ ಮುಸುಕಾಗಿ, ಅಡಿಕಾಲಿನವರೆಗೂ ಇಳಿ ಬಿದ್ದು, ಮೈಯ ಸುತ್ತ ಎಳೆದು ಮುಚ್ಚಿಕೊಳ್ಳುವಂತಹ ಏಕವಸ್ತ್ರ ಇದು.

ಓದಿದ್ದಾನೆ—ಹೆಸಿಯಡ್, ಹೋಮರ್, ಪ್ಲೇಟೊ, ಅರಿಸ್ಟಾಟ್ಲ್ ಮೊದಲಾದ ಆದಿಕವಿಗಳನ್ನು, ಆದಿತತ್ತ್ವಜ್ಞರನ್ನು; ತುಂಬ ಕಂಡಿದ್ದಾನೆ—ಲೋಕದ ನಡೆ ವಳಿಕೆಗಳನ್ನು. ತಾನು ತಂದಿರುವ ಸಂದೇಶದಲ್ಲಿ ಮೂವತ್ತು ಸಾವಿರ ಜೀವಕ್ಕೆ ವಿಮೋಚನೆಯೂ ಒಂದು ಜೀವಕ್ಕೆ ದಾರುಣವಾದ ಯಾತನೆಯೂ ತುಂಬಿದೆ ಯೆಂಬುದನ್ನು ತಿಳಿದಿದ್ದಾನೆ. ಪ್ರಿನ್ಸಿವಲ್ಲೆಯನ್ನು ಎದುರಾಗಿ ಕಂಡು, ಅವನ ಗುಣಗಳಿಗೆ ಮೆಚ್ಚಿಕೊಂಡಿದ್ದಾನೆ, "ಒಮ್ಮೆಯಾದರೂ ಅವಿವೇಕ ಮಾಡದಂಥ ಬುದ್ಧಿವಂತನೆಲ್ಲುಂಟು? ಯಾವುದೋ ವಿಕಾರವಾದ ದುರ್ಭಾವನೆಗೆ ಒಮ್ಮೆ ಯಾದರೂ ಮನಸ್ಸಿನಲ್ಲಿ ಎಡೆಗೊಡದ ಶೀಲವಂತನೆಲ್ಲುಂಟು?" ಎಂದು ಅವನ ನಡತೆ ತಪ್ಪಿದರೂ ಅದನ್ನು ಅರ್ಥಮಾಡಿಕೊಂಡಿದ್ದಾನೆ. ಅವನ ಕೋರಿಕೆ ಯನ್ನು ಈಡೇರಿಸುವುದು ತಪ್ಪು ಎಂದು ಒಪ್ಪಿಕೊಂಡರೂ, ಪ್ರಕೃತದಲ್ಲಿ ಅದನ್ನು ಬಿಟ್ಟು ಬೇರೆ ಏನು ದಾರಿ? ಯುದ್ಧ ಮಾಡಲು ಪೀಸಾಗೆ ತ್ರಾಣವಿಲ್ಲ, ಜನರಿಗೆ ಉತ್ಸಾಹವಿಲ್ಲ, ಎದುರಿನ ಶತ್ರು ನಿಷ್ಕರುಣಿ. ಮತ್ತೇನು ದಾರಿ? ಮೊನ್ನ ವನ್ನ ತನ್ನ ಪಾತಿವ್ರತ್ಯವನ್ನು ಕಾಪಾಡಿಕೊಂಡು, ಅವಳ ಜೊತೆಗೆ ಸಮಸ್ತ ಪೀಸಾ ನಿರ್ನಾಮವಾಗಬೇಕೆ? ಅಥವಾ ಅವಳು ತನ್ನ ಪಾತಿವ್ರತ್ಯ ವನ್ನು ಬಲಿಕೊಟ್ಟು, ಮೂವತ್ತು ಸಾವಿರ ಜೀವಗಳನ್ನು ಉಳಿಸಬೇಕೆ? ಸಂಪ್ರ ದಾಯದಲ್ಲಿ ಬೆಳೆದು ಬಂದ ಮನಸ್ಸು ನಿರ್ಯೋಚನೆಯಿಂದ, ಅಥವಾ ಎಷ್ಟೇ ಯೋಚನೆ ಮಾಡಿದರೂ ಯಾವುದನ್ನೇ ಒಪ್ಪುತ್ತದೋ ಅದನ್ನು ಬಿಟ್ಟು, ಮಾರ್ಕೊ, ಕೇಳಿದವರು ಕೆರಳುವಂಥ, ಕೇಳಿದವರು ಕೊಕ್ಕರಿಸುವಂಥ, ಕೇಳಿ ದವರು ಹೀನೈಸುವಂಥ ಮಾರ್ಗಾಂತರವೇ ನ್ಯಾಯ, ಅದೇ ಧರ್ಮ, ಸಾವಿರ ಜೀವಿಗಳಿಗೆ ಜೀವದಾನಮಾಡುವುದಕ್ಕೆ ಯಾವ ತ್ಯಾಗವಾದರೂ ಅತ್ಯಲ್ಪ ಎಂಬ ವಿವೇಕವನ್ನು ತಾನು ಒಪ್ಪಿದ್ದಾನೆ.

ಈ ಅಭೂತಪೂರ್ವವಾದ ಇತ್ಯರ್ಥವನ್ನು ಸಂಬಂಧಪಟ್ಟ ಇತರರು ಒಪ್ಪ ಬೇಕಷ್ಟೆ. ತನ್ನನ್ನು ಸಂಧಾನಕ್ಕೆ ಕಳುಹಿಸಿದ ಸೇನಾಪತಿ, ತನ್ನ ಮಗ, ಇದಕ್ಕೆ ಸಹಜವಾಗಿಯೇ ಒಪ್ಪುವುದಿಲ್ಲ ಎಂಬುದು ಮಾರ್ಕೋವಿಗೆ ಗೊತ್ತು. ಅದಕ್ಕಿಂತ ಖಚಿತವಾಗಿ ಗೊತ್ತು: ಇಂತಹ ಸಂದರ್ಭದಲ್ಲಿ ಸ್ವಂತ ದುಃಖಕ್ಕಿಂತ ಕರ್ತವ್ಯ ಪಾಲನೆಯೇ ದೊಡ್ಡದು ಎಂಬುದು. ಈ ಕರ್ತವ್ಯಪಾಲನೆಯನ್ನು ಕುರಿತು ನಿರ್ಧರಿಸುವ ಭಾರ ತನ್ನ ಮಗನ ಮೇಲಿನದು ಎಂಬುದಕ್ಕಿಂತ ಅದು ತನ್ನ

ಸೊಸೆಯ ಮೇಲಿನದು ಎಂಬುದನ್ನು ಮಾರ್ಕೊ ಬಲ್ಲ. ಮಗನಿಗಿಂತ ಸೊಸೆ ಹೆಚ್ಚು ವಿವೇಕಶಾಲಿ ಎಂಬುದನ್ನೂ ಬಹುಶಃ ಮುದುಕ ತಿಳಿದಿದ್ದನೆಂದು ತೋರುತ್ತದೆ. ಆದ್ದರಿಂದಲೇ ಸಂಧಾನದ ಸುದ್ದಿಯನ್ನು ಮಗನ ಕಿವಿಗೆ ಹಾಕುವು ದಕ್ಕೆ ಮೊದಲು ಅದನ್ನು ಮೊನ್ನ ವನ್ನಾಗೆ ಹೇಳಿದ್ದಾನೆ, ಅನಂತರ ಪೀಸಾದ ಮಂತ್ರಿಮಂಡಲಕ್ಕೂ ತಿಳಿಸಿದ್ದಾನೆ. ಇಂತಹ ದಾರುಣವಾದ ಸಂಗತಿಯನ್ನು ಸೊಸೆಯ ಹತ್ತಿರ ಕೇವಲ ಕರ್ತವ್ಯಬುದ್ಧಿಯಿಂದ ಹೇಳಿಕೊಂಡ ಈ ವೃದ್ಧನ ಮನಸ್ಸಿನ ದಾರ್ಢ್ಯ ಅಪೂರ್ವವಾದದ್ದು.

ಗ್ವೀಡೊ ಮಾರ್ಕೊವಿನ ಮಾತನ್ನು ಕೇಳುತ್ತಾನೆ. ತನ್ನ ಕಿವಿಗಳನ್ನು ತಾನು ನಂಬಲಾರದೆ ಕೇಳುತ್ತಾನೆ. ತಂದೆಗೆ ಬುದ್ಧಿಭ್ರಂಶವಾಗಿದೆ ಎಂದು ಕೊಳ್ಳುತ್ತಾನೆ, ಅವನಿಗೆ ಭೀತಿ ಎಂದುಕೊಳ್ಳುತ್ತಾನೆ. ತಂದೆಗೂ ಮಗನಿಗೂ ನ್ಯಾಯ ಅನ್ಯಾಯ ಧರ್ಮ ಅಧರ್ಮಗಳನ್ನು ಕುರಿತು ಚರ್ಚೆಯಾಗುತ್ತದೆ. ಕ್ರೋಧದಿಂದಲೂ ಮಾನದಿಂದಲೂ ಸ್ವಾರ್ಥದಿಂದಲೂ ಸಂಪ್ರದಾಯಬದ್ಧತೆ ಯಿಂದಲೂ ಗ್ವೀಡೊ ಪ್ರಕೃತದ ಪರಿಸ್ಥಿತಿಯಲ್ಲಿ ಯಾವುದು ಕರಣೀಯ ಎಂಬು ದನ್ನು ಸ್ಪಷ್ಟವಾಗಿ ಕಾಣಲಾರ. ಆದರೆ, ತನಗೂ ತನ್ನವರಿಗೂ ಸಂಬಂಧಿಸಿದ ಮಹಾದುಃಖಗಳನ್ನು ತತ್ಕಾಲಕ್ಕೆ ಮರೆತು, ಮೂರುಸಾವಿರ ಜೀವಗಳನ್ನು ಉಳಿಸುವುದು ಹೇಗೆಂದು ಕಾತರನಾಗಿರುವ ಮಾರ್ಕೊವಿಗೆ ಕರ್ತವ್ಯ ಯಾವು ದೆಂಬುದರ ಬಗ್ಗೆ ಏನೂ ಸಂದೇಹವಿಲ್ಲ. ಅನುಭವಿಯಾದ ತಂದೆಯ ಮಾತುಗಳ ಅಂತಸ್ಸಾರವನ್ನು ಏನೇನು ಮಾಡಿದರೂ ಮಗ ಕಾಣಲಾರ. ಕೊನೆಗೆ ಅದರ ಇತ್ಯರ್ಥವನ್ನು ತನ್ನ ಹೆಂಡತಿಯೆ ಹೇಳಲಿ ಎಂದುಬಿಡುತ್ತಾನೆ.

ಗ್ವೀಡೊ, ಪಾಪ, ಅಷ್ಟು ವರ್ಷ ವನ್ನಳೊಡನೆ ಸಂಸಾರಮಾಡಿದ್ದರೂ, ಅವಳ ಜೀವದ ಔದಾರ್ಯವನ್ನು ಕಂಡಿರಲಿಲ್ಲ. ಆ ಹೆಣ್ಣಿನ ಹೃದಯವನ್ನು ಈ ಗಂಡನಿಗಿಂತ ಮಾವನೇ ಚೆನ್ನಾಗಿ ತಿಳಿದಿದ್ದ. ಆದ್ದರಿಂದಲೇ ಮಗನಿಗೆ ಸಂಧಾನದ ಸುದ್ದಿಯನ್ನು ತಿಳಿಸುವ ಮೊದಲು ಮಾರ್ಕೊ ಅದನ್ನು ಸೊಸೆಗೆ ಹೇಳಿ ಬಂದದ್ದು.

ಇತ್ತ, ವನ್ನ, ನಗರದವರ ಅಸಹಾಯ ಸ್ಥಿತಿಯನ್ನು ಕುರಿತು ಕರಗಿ ದ್ದಾಳೆ. ಅವರಿಗೆ ಅಭಯಕೊಟ್ಟು, ಅವರನ್ನು ಉಳಿಸಬೇಕಾದರೆ, ಬೇರೆ ಮಾರ್ಗವೇ ಇಲ್ಲ ಎಂಬುದನ್ನು ವಿವೇಚಿಸಿದ್ದಾಳೆ. ವಯಸ್ಸಿನಲ್ಲಿ ತನ್ನ ಮಾವ

ನಿಗಿಂತ ಎಷ್ಟೋ ಕಿರಿಯಳಾದರೂ, ಆತನಂತೆಯೇ ತನ್ನ ಸ್ವಂತ ದುಃಖವನ್ನು ಒಂದು ಪಕ್ಕಕ್ಕೆ ಓಸರಿಸಿ, ಕರ್ತವ್ಯಕ್ಕೆ ಅಭಿಮುಖವಾಗಿ ಅದನ್ನು ಕುರಿತು ನೋಡುವ ದಾರ್ಢ್ಯ ಅವಳಿಗುಂಟು. ಅದರಿಂದಲೇ ನಿರ್ಧಾರಕ್ಕೆ ಬಂದಿದ್ದಾಳೆ: ಇಷ್ಟು ಜೀವಗಳನ್ನು ಬದುಕಿಸುವುದಕ್ಕಾಗಿ ತನ್ನನ್ನು ತಾನು—ಕೇವಲ ತನ್ನ ತನುಮನಗಳನ್ನು ಮಾತ್ರವಲ್ಲ, ಪ್ರಾಣವನ್ನಷ್ಟೇ ಅಲ್ಲ, ಹೆಣ್ಣಿಗಂತೂ ಜೀವಿತ ಸರ್ವಸ್ವವೇ ಆದ ಮಾನವನ್ನು—ಬಲಿಯೊಪ್ಪಿಸಿಬಿಡುವೆನೆಂದು.

ಗ್ವೀಡೊ, ತನ್ನ ಸ್ವಂತ ದುಃಖದಲ್ಲಿ ಮುಚ್ಚಿ ಮುಳುಗಿ, ವಿಷಯಗಳ ಯಥಾರ್ಥವಾದ ಮೌಲ್ಯವನ್ನು ಕಾಣಲು ಅಸಮರ್ಥನಾದವನು, ತನ್ನ ತಂದೆಯ ಮನಸ್ಸನ್ನು ಹೇಗೆ ಅರ್ಥಮಾಡಿಕೊಳ್ಳಲಾರದೆ ಹೋದನೋ ಹಾಗೆಯೇ ತನ್ನ ಹೆಂಡತಿಯ ಮನಸ್ಸನ್ನೂ ಅರ್ಥಮಾಡಿಕೊಳ್ಳಲಾರ. ಅವನ ಮೋಹಗೊಂಡ ಮನಸ್ಸನ್ನು ಯುಕ್ತಿಯುಕ್ತವಾದ ವಿವೇಕವಚನಗಳಿಂದ ಒಲಿಸಿ ಕೊಳ್ಳುವುದು ಆ ತಂದೆಗೆ ಹೇಗೆ ಆಗದೆ ಹೋಯಿತೋ ಇವಳಿಗಾದರೂ ಹಾಗೆಯೆ ಆಗದೆ ಹೋಯಿತು. ಗ್ವೀಡೊ ಅವಳ ಅರ್ಪಣೆಯ ಸತ್ಯಾರ್ಥವನ್ನು ಕಾಣಲಾರ. ಅವಳನ್ನು ನೋಡಲೊಲ್ಲದೆ, ಅವಳಿಂದ ವಿಮುಖನಾಗಿ, ಪ್ರಿನ್ಸಿ ವಲ್ಲೆಯಲ್ಲಿ ಅವಳು ಅನುರಕ್ತಳೆಂದು ಭ್ರಮಿಸಿ, ಅಸೂಯೆಯ ಆಗ್ರಹಕ್ಕೆ ವಶನಾಗಿ, ಹುಚ್ಚೆದ್ದು ಅವಳನ್ನು ದೂರಮಾಡಿಕೊಳ್ಳುತ್ತಾನೆ.

ವನ್ನ, ಪ್ರಜೆಗಳನ್ನು ಉಳಿಸುವುದಕ್ಕೋಸ್ಕರ ತನ್ನನ್ನು ಅರ್ಪಿಸಿಕೊಳ್ಳು ವುದು ಸದ್ಯದ ಕರ್ತವ್ಯ ಎಂಬುದರ ಜೊತೆಗೆ ತನ್ನ ಚರ್ಯೆಯನ್ನು ಗಂಡನಿಗೆ ಬಿಡಿಸಿ ಹೇಳಿ, ಅವನ ಮನಸ್ಸಿಗೆ ಇದು ಅನಿವಾರ್ಯವೆಂಬ ಸತ್ಯಭಾವನೆಯ ನ್ನಾದರೂ ಉಂಟುಮಾಡಿಕೊಟ್ಟು ಹೋಗಬೇಕೆಂದು ಇನ್ನಿಲ್ಲದಂತೆ ಪ್ರಯತ್ನಿ ಸಿದವಳು, ಕಡೆಗೂ ಕೃತಕೃತ್ಯಳಾಗದೆ, 'ಮತ್ತೆ ಅವನ ಕಡೆ ಕಣ್ ತಿರುಗಿಸದೆ,' ಪ್ರಿನ್ಸಿವಲ್ಲೆಯ ಪಾಳೆಯದ ಕಡೆಗೆ ಹೋಗುವಳು.

ಇಲ್ಲಿಗೆ ಮೊದಲನೆಯ ಅಂಕ ಮುಗಿಯಿತು. ಇದರಲ್ಲಿ ಕಥೆ ಮುಂದು ವರಿದಿಲ್ಲ. ಘಟನೆಗಳು ಏನೂ ನಡೆದಿಲ್ಲ. ಬೊರ್ಸೊ (Borso) ಮತ್ತು ಟೊರೆಲ್ಲೊ (Torello) ಎಂಬ ಇಬ್ಬರು ದಳಪತಿಗಳನ್ನು ಬಿಟ್ಟರೆ, ಉಳಿದ ಮೂರು ಮುಖ್ಯಪಾತ್ರಗಳಲ್ಲಿ ಬೆಳೆವಣಿಗೆ ಕಾಣುವುದಕ್ಕಿಂತ ಈ ಅಂಕದ ತುಂಬ ವಿಚಾರ ಮಥನವೇ ತುಂಬಿಹೋಗಿದೆ. ಪ್ರಿನ್ಸಿವಲ್ಲೆ ಹೀಗೆ ಕೇಳ

ಬಹುದೆ? ಮಾರ್ಕೊ ಅದನ್ನು ಅನುಮೋದಿಸಬಹುದೆ? ಗ್ವೀಡೊ ಅದನ್ನು ನಿರಾಕರಿಸಬಹುದೆ? ವನ್ನ ಅದಕ್ಕೆ ಒಪ್ಪಿಕೊಳ್ಳಬಹುದೆ? ಬಹುದು, ಬಾರದು, ಎನ್ನುವುದಕ್ಕೆ ಏನೇನು ಕಾರಣಗಳನ್ನು ಅಲ್ಲಲ್ಲಿ ಕೊಟ್ಟರೂ, ಅವರವರ ಕಾರಣ, ಅವರವರ ವಾದ ಅವರವರ ದೃಷ್ಟಿಯಿಂದ ನಿರ್ದುಷ್ಟವಾದುದು, ಅದು ಹೊರತು ಬೇರೆ ದಾರಿಯಿಲ್ಲ, ಎಂಬಂತೆ ನಡಸಿಕೊಂಡಿರುವುದು ಈ ಅಂಕದ ವೈಶಿಷ್ಟ್ಯ.

ಎರಡನೆಯ ಅಂಕ :

ಮೊನ್ನ ವನ್ನ ಅತ್ತ ಹೊರಟಿದ್ದಾಳೆ. ಇತ್ತ, ಪ್ರಿನ್ಸಿವಲ್ಲೆ ಆಕೆ ಬರುವಳೋ ಬಾರಳೋ ಎಂದು ಸಂದೇಹಗ್ರಸ್ತನಾಗಿ ಕಳವಳಿಸುತ್ತಿರುವಾಗಲೇ ವನ್ನ ಬರುವಳೆಂಬುದನ್ನು ಸೂಚಿಸುವ ದೊಡ್ಡ ಬೆಳಕು ಪೀಸಾದಿಂದ ಗೋಚರವಾಗುವುದು.

ಅದೇ ವೇಳೆಗೆ ಸರಿಯಾಗಿ ಫ್ಲಾರೆನ್ಸಿನ ಪ್ರಜಾರಾಜ್ಯದ ನಿಯೋಗಿಯಾದ ಟ್ರೈವಲ್ಸಿಯೊ (Trivulzio) ಪ್ರಿನ್ಸಿವಲ್ಲೆಯನ್ನು ಕಾಣಲು ಬರುತ್ತಾನೆ. ಪೀಸಾ ನಿರ್ಬಲವಾಗಿರುವ ಸ್ಥಿತಿಯಲ್ಲಿಯೇ ಅದನ್ನು ಹುಟ್ಟಡಗಿಸಿಬಿಡದೆ ಕೈ ತಡೆದು ನಿಲ್ಲಿಸಿರುವ ಸೇನಾಪತಿಯನ್ನು ಎಚ್ಚರಿಸಲು ಅವನು ಬರುತ್ತಿದ್ದಾನೆ. ಆದರೆ, ಈ ಯುದ್ಧದಲ್ಲಿ ತನ್ನ ಉಪಯೋಗ ಮುಗಿದ ಕೂಡಲೆ ತನ್ನನ್ನು ಅಧಿಕಾರದಿಂದ ಕಿತ್ತು ಒಗೆಯಬೇಕೆಂಬ ಫ್ಲಾರೆನ್ಸಿನ ಗುಪ್ತಮಂತ್ರಗಳಿಗೆ ಈ ಟ್ರೈವಲ್ಸಿಯೊ ಪುರೋಹಿತನೆಂಬುದನ್ನು ಪ್ರಿನ್ಸಿವಲ್ಲೆ ಬಲ್ಲ. ಟ್ರೈವಲ್ಸಿಯೊ ಬರೆದ ಕಾಗದಗಳನ್ನೂ ಫ್ಲಾರೆನ್ಸಿನವರ ಗುಪ್ತ ಆಜ್ಞೆಗಳನ್ನೂ ರಹಸ್ಯವಾಗಿ ಅವನು ತಿಳಿದಿದ್ದಾನೆ. ಆದ್ದರಿಂದಲೇ ಫ್ಲಾರೆನ್ಸಿಗೆ ದ್ರೋಹಮಾಡಿ, ಪೀಸಾಗೆ ನೆರವಾಗುವುದು ಅನ್ಯಾಯವಲ್ಲವೆಂದು ಅವನ ಸಮಾಧಾನ.

ಇಲ್ಲಿ ಕೂಡ, ಪ್ರಿನ್ಸಿವಲ್ಲೆ ಟ್ರೈವಲ್ಸಿಯೊ ಪರಸ್ಪರ ಸಂಧಿಸಿದಾಗ ದ್ರೋಹದ ಧರ್ಮಾಧರ್ಮದ ಬಗೆಗೆ ಚರ್ಚೆ ನಡೆಯುತ್ತದೆ. ಇಬ್ಬರೂ ತಮ್ಮ ತಮ್ಮ ಪ್ರಸ್ಥಾನಗಳನ್ನು ವಿವರಿಸುತ್ತಾರೆ. ಕಡೆಗೆ ಟ್ರೈವಲ್ಸಿಯೊ ತನ್ನ ಗುಟ್ಟು ರಟ್ಟಾಯಿತೆಂದು ಹತಾಶನಾಗಿ ಪ್ರಿನ್ಸಿವಲ್ಲೆಯನ್ನು ಕೊಲ್ಲಲು ಕಠಾರಿಯಿಂದ ಹೊಡೆಯುತ್ತಾನೆ. ಅದು ಪ್ರಿನ್ಸಿವಲ್ಲೆಯ ಮುಖವನ್ನು ಗಾಯಮಾಡುತ್ತದೆ. ಟ್ರೈವಲ್ಸಿಯೊ ಪ್ರಿನ್ಸಿವಲ್ಲೆಯ ಕೈಗೆ ಸಿಕ್ಕಿ ಸೆರೆಯಾದರೂ, ಸಾವಿನ ಎದುರಲ್ಲಿ

ಕೂಡ ಅಂಜದಿದ್ದ ಅವನ ಧೈರ್ಯವನ್ನು ಕಂಡು, ಪ್ರಿನ್ಸಿವಲ್ಲೆ ಮೆಚ್ಚುತ್ತಾನೆ. ಕತ್ತಿಯ ಮೊನೆಯನ್ನು ಅವಲಂಬಿಸದ ಧೈರ್ಯದ ಪ್ರಕಾರವೂ ಉಂಟು ಎಂಬುದನ್ನು ಹೊಸದಾಗಿ ಕಾಣುತ್ತಾನೆ. ಫ್ಲಾರೆನ್ಸ್ ನಗರದ ಕ್ಷೇಮಕ್ಕೋಸ್ಕರ, ತನ್ನ ನಂಬಿಕೆಗಳಿಗನುಸಾರವಾಗಿ, ಈ ಟ್ರೈವಲ್ಸಿಯೊ ಯಾರಿಗೆ ದ್ರೋಹ ಮಾಡುವುದಕ್ಕೂ ಸಿದ್ಧ, ತನ್ನ ಪ್ರಾಣ ಬಿಡುವುದಕ್ಕೂ ಸಿದ್ಧ, ಎಂಬುದನ್ನು ಪ್ರಿನ್ಸಿವಲ್ಲೆ ಕಾಣುತ್ತಾನೆ, ಅದಕ್ಕಾಗಿ ಅವನನ್ನು ಮೆಚ್ಚಿಕೊಳ್ಳುತ್ತಾನೆ.

ಹೀಗೆ, ವನ್ನ ಬರುವ ಮುಂಚೆ, ಪ್ರಿನ್ಸಿವಲ್ಲೆಯ ಹೃದಯವನ್ನು ಹದ ಮಾಡುವುದಕ್ಕೆ, ಅವನ ಅತ್ಯಾಚಾರದ ಜೊತೆಗೆ ದ್ರೋಹದ ಭಾರವೂ ಸೇರಿಕೊಳ್ಳುವುದನ್ನು ತಿಳಿದು ಕ್ಷಮಿಸುವಂತೆ, ಕವಿ ಈ ಪಾತ್ರವನ್ನು ಪ್ರವೇಶಿಸಿ, ಅನಂತರ ಅವನನ್ನು ಸೆರೆಗೆ ಕಳುಹಿಸುತ್ತಾನೆ.

ಅತ್ತ ಟ್ರೈವಲ್ಸಿಯೊವನ್ನು ಕಳಿಹಿದ ಮೇಲೆ, ಅವನ ಕಾರ್ಯದರ್ಶಿ ವೀಡಿಯೊ (Vedio) ಗಾಯಕ್ಕೆ ಬಟ್ಟೆ ಕಟ್ಟುವ ಹೊತ್ತಿಗೆ, ವನ್ನ ಬರುತ್ತಾಳೆ. ಪಾಳೆಯಕ್ಕೆ ಪ್ರವೇಶಿಸುವ ಮೊದಲು ಒಂದು ಗುಂಡು ಹಾರಿ, ಅವಳ ಹೆಗಲನ್ನು ಮುಟ್ಟಿಹೋಗಿ, ರಕ್ತ ಬಂದಿರುತ್ತದೆ. ಪಾಳೆಯದವರು ಯಾರಾದರೂ ಹೊಡೆದು ಹಾರಿತೋ, (ಅಥವಾ ಬುದ್ಧಿ ಭ್ರಮೆಗೊಂಡ ಗ್ವೀಡೋ ಯಾರನ್ನಾದರೂ ಅವಳ ಜೀವ ತೆಗೆಯಲು ಕಳಿಸಿದ್ದನೋ) ತಿಳಿಯದು. ಅಂತೂ ಈ ಘಟನೆಯಿಂದ ವನ್ನಳನ್ನು ಕಂಡೊಡನೆ ಪ್ರಿನ್ಸಿವಲ್ಲೆಗೆ ತನ್ನ ಕಾಮಕ್ಕಿಂತ ಮೊದಲು ಅವಳ ಕ್ಷೇಮದ ಬಗ್ಗೆ ಆತಂಕವುಂಟಾಗುತ್ತದೆ.

ಗಾಯ ಅಷ್ಟು ಘೋರವಾದುದಲ್ಲ ಎಂದು ನಿಶ್ಚಿಂತೆಯಾದ ಮೇಲೆ, ಪ್ರಿನ್ಸಿವಲ್ಲೆ ತನ್ನ ನಿಬಂಧನೆಗಳನ್ನು ಜ್ಞಾಪಿಸುತ್ತಾನೆ. ಅವಳು, ಶೀಲವತಿಯಾದವಳು, ಪತಿಪ್ರಾಣೆಯಾದವಳು ಇಂಥದಕ್ಕೆ ಒಪ್ಪಿಕೊಂಡದ್ದು ಅವನಿಗೆ ಅರ್ಥವಾಗದು. ವನ್ನ ತಿಳಿಯಹೇಳುತ್ತಾಳೆ: "ಏಕೆಂದರೆ—ಅದೊ ಅಲ್ಲಿ ಅವರು ಹಸಿವಿನಿಂದ ನಾಶವಾಗುತ್ತಿದ್ದಾರೆ. ನಾಳೆ ಅದಕ್ಕಿಂತ ಶೀಘ್ರವಾದ ಸಾವು ಅವರಿಗಾಗಿ ಕಾದು ಕುಳಿತಿದೆ . . . ಕಾರಣ ಬೇರೆ ಏನು ಇದ್ದೀತು?" ಅದಕ್ಕಾಗಿ, ಒಪ್ಪಿಕೊಂಡಂತೆ ಏಕವಸ್ತ್ರಧರಳಾಗಿ ಬಂದಿದ್ದಾಳೆ.

ಅವಳು ಒಪ್ಪಿ ಬಂದಿದಾಳೆ, ನಿಜ; ಆದರೂ ವ್ಯಥೆಯಿಲ್ಲದೆ ಬಂದಿಲ್ಲವೆಂಬುದೂ ನಿಜ. ನಿಬಂಧನೆಯಂತೆ ಅವಳು ಬಂದಾಯಿತು, ನಿಬಂಧನೆಯಂತೆ

ಪೀಸಾಗೆ ಗಾಡಿಗಳನ್ನು ಕಳುಹಿಸಿಯಾಯಿತು—ಅನ್ನಾಹಾರಗಳನ್ನು, ಮದ್ದು ಗುಂಡುಗಳನ್ನು ತುಂಬಿ ತುಂಬಿ.

ಅವುಗಳನ್ನು ಆಚೆ ಕಳಿಸಿ, ಈಚೆ ಇಬ್ಬರೂ ಗುಡಾರದೊಳಕ್ಕೆ ಬಂದಿದ್ದಾರೆ. ಪ್ರಿನ್ಸಿವಲ್ಲೆ, ಅವಳು ಏಕವಸ್ತ್ರಧರಳು, ನಿರಾಯುಧಳು ಎಂಬುದನ್ನು ನಿಶ್ಚಯಮಾಡಿಕೊಂಡು, ಅವಳನ್ನು ತನ್ನ ಮಂಚದ ಮೇಲೆ ಕುಳ್ಳಿರಿಸಿದ್ದಾನೆ. ಇಲ್ಲಿಂದ ಮುಂದೆ—ಮೊದಲನೆಯ ಅಂಕದ ಮಾತುಕತೆಗಳಿಂದ ನಾವು ಏನು ನಿರೀಕ್ಷಿಸಿದ್ದೆವೋ, ಮ್ಯಾಟರ್ಲಿಂಕಿಗಿಂತ ಮಹತಿಯಲ್ಲಿ ಕಡಮೆಯಾದವನು ಏನು ಮಾಡಿಹಾಕಿಬಿಡುತ್ತಿದ್ದನೋ ಅದು ಒಂದೂ ಆಗದೆ, ಕಥೆ ಒಂದು ಕಿನ್ನರಪ್ರಪಂಚವನ್ನು ಪ್ರವೇಶಿಸಿದಂತೆ ಸಾಗುತ್ತದೆ.

ಪ್ರಿನ್ಸಿವಲ್ಲೆ ಹನ್ನೆರಡು ವರ್ಷದ ಹುಡುಗನಾಗಿದ್ದಾಗ ವನ್ನ ಅವನಿಗಿಂತ ನಾಲ್ಕು ವರ್ಷ ಚಿಕ್ಕವಳು. ಅವನ ಹೆಸರು ಗಯಾನೆಲ್ಲೊ, ಇವಳ ಹೆಸರು ಗಯೋವನ್ನ. ಅವಳು ಕುಲೀನರ ಮಗಳು, ಇವನು ಅವರ ಮನೆಯ ಅಕ್ಕಸಾಲೆಯ ಮಗ. ಆಗ ಇವನಿಗೆ ಅವಳಲ್ಲಿ ಉಂಟಾದ ಮುಗ್ಧ ಅನುರಾಗವು ವರ್ಷಗಳಾದರೂ ಅಳಿಸಿಹೋಗದೆ, ಕಾಲ ಕಳೆದಂತೆಲ್ಲ ಬೇರೂರಿ ದೃಢವಾಗಿದೆ. ಅವಳಿಗಾದರೋ ಅದು ಸ್ವಲ್ಪ ಕಾಲದ ಮೇಲೆ ಮಾಸಿ, ಮುಂದೆ ತಾನು ಅನಾಥೆಯಾದಾಗ ತನಗೆ ಆಶ್ರಯ ಕೊಟ್ಟು ತನ್ನ ಕೈಹಿಡಿದ ಗ್ವೀಡೊ ಕೊಲೊನ್ನನಿಗೆ ತಪ್ಪದ ಪತ್ನಿಯಾಗಿ ಸುಖದಿಂದಿದ್ದಾಳೆ. ಈಗ "ಎಲ್ಲಕ್ಕಿಂತ ಮಿಗಿಲಾದದ್ದು ನನ್ನ ಜನರ ಪ್ರಾಣ" ಎಂಬ ಬುದ್ಧಿಯಿಂದ ಪರಪುರುಷನ ಗುಡಾರಕ್ಕೆ ನಮರಾತ್ರಿಯಲ್ಲಿ ಏಕಾಂಗಿನಿಯಾಗಿ ಏಕವಸ್ತ್ರಳಾಗಿ ಗತ್ಯಂತರವಿಲ್ಲದೆ ಬಂದಿದ್ದಾಳೆ. ತನ್ನ ನಿಲವು ನ್ಯಾಯವೆಂಬ ಅಂತಃಸಾಕ್ಷಿಯ ಬಲದಿಂದ ನಿರ್ಭೀತಳಾಗಿದ್ದಾಳೆ. ತನ್ನ ಶೀಲಭಂಗಮಾಡಬೇಕೆಂದು ಉದ್ದೇಶಿಸಿದವನು ತನ್ನ ಚಿಕ್ಕಂದಿನ ಒಡನಾಡಿ ಎಂಬುದನ್ನು ತಿಳಿಯುತ್ತಾಳೆ. ಅವನು ತೋಡಿಕೊಂಡ ಪ್ರಣಯದ ನಿರುಪಮಕಥನವನ್ನು ಕಿವಿ ತೆರೆದು ಕೇಳುತ್ತಾಳೆ. ಅವನ ಪ್ರಣಯವನ್ನು ಅನಾಸಕ್ತಳಾಗಿ ಅಳೆದು ತೂಗುತ್ತಾಳೆ. ಅವನ ದೇಶದ್ರೋಹದ ವಿಮರ್ಶೆ ಮಾಡುತ್ತಾಳೆ. ಅವನ ಸ್ಥಾನದಲ್ಲಿ ತಾನು ಇದ್ದಿದ್ದರೆ ತನ್ನ ಪ್ರಣಯ ಈಡೇರಲು ಏನು ಮಾಡುತ್ತಿದ್ದೆನೆಂದು ಭಾವಿಸಿ ಹೇಳುತ್ತಾಳೆ. ಸ್ವಭಾವತಃ ಮೌನವಾಗಿರುವವಳು, ಮಾರ್ಕೊವನ್ನು ಬಿಟ್ಟರೆ ಬೇರೆ ಯಾವ ಪರಪುರುಷ

ನೊಡನೆಯೂ ಮಾತನಾಡದ ವನ್ನ, ಈಗ ಪ್ರಿನ್ಸಿವಲ್ಲೆಯೊಡನೆ ತನ್ನ ಹೃದಯ ವನ್ನು ಬಿಚ್ಚಿ ಹೇಳುತ್ತಿದ್ದಾಳೆ. ಈ ಹಿಂದಿನ ನೆನಪಿನಿಂದ, ಈಗ ಕೇಳಿದ ಈ ದುರ್ದಮ್ಯವಾದ ಪ್ರಣಯಕಥನದಿಂದ ಅವಳಿಗೆ ಸಂತೋಷವಾಗಿಲ್ಲ ಎನ್ನು ವಂತಿಲ್ಲ. ಆದರೂ, ತಾನು ಗ್ವೀಡೋವಿನ ಪತ್ನಿಯೆಂಬುದನ್ನಾಗಲಿ, ಕೇಳಿದ ಆಹುತಿಯನ್ನು ಒಪ್ಪಿಸಬೇಕೆಂಬ ಕೇವಲ ಕರ್ತವ್ಯಬುದ್ಧಿಯಿಂದ ಬಂದಿರುವೆ ನೆಂಬುದನ್ನಾಗಲಿ ಅವಳು ಮರೆತಿಲ್ಲ. "ಪ್ರಪಂಚದಲ್ಲಿ ನಾನೊಬ್ಬಳೆ ಇದ್ದಿದ್ದರೆ, ಹೆಚ್ಚು ಹೇಳಬೇಕಾದ್ದು ಇರುತ್ತಿರಲಿಲ್ಲ . . . ಆದರೆ, ನಾವಿಬ್ಬರೂ ಕಳೆದು ಹೋದುದನ್ನು ನೆನೆದು ನಸುನಗುತ್ತಿದ್ದರೆ, ಅಲ್ಲಿ ಇನ್ನೊಬ್ಬನು ದುಃಖಪಡು ತ್ತಿರುವನೆಂಬುದನ್ನು ಮರೆಯುತ್ತಿದ್ದೇವೆ" ಎನ್ನುತ್ತಾಳೆ.

ಪ್ರಿನ್ಸಿವಲ್ಲೆಗಾದರೂ ಮಾರ್ಕೋ ಹತ್ತಿರ ಹೇಳಿ ಕಳಿಸಿದಾಗ ನಿಜ ವಾಗಿಯೂ ಮನಸ್ಸಿನಲ್ಲಿ ಏನು ವಿಷಯವಾಸನೆ ಎಷ್ಟು ತುಂಬಿತ್ತೊ, ವನ್ನಳನ್ನು ಕಾಣುವ ವೇಳೆಗೆ ಮನಸ್ಸು ತಿಳಿಯಾಗಿತ್ತು. ಕಡೆಗೆ ಅವನೇ ಹೇಳುತ್ತಾನೆ: "ಈಗ ಹಾಗೇ ಯೋಚನೆ ಮಾಡಿದರೆ, ನನಗೇ ಆಶ್ಚರ್ಯವಾಗುತ್ತದೆ . . . ನಿನ್ನದಲ್ಲದ ಒಂದು ಮಾತು, ನಿನ್ನ ಅಂಗಭಾವಕ್ಕಿಂತ ಬೇರೆಯಾದ ಒಂದು ಅಂಗಭಾವ—ಅಷ್ಟು ಮಾತ್ರ ಸಾಕಾಗುತ್ತಿತ್ತು, ನನ್ನೊಳಗಿನ ಪಶುಪ್ರವೃತ್ತಿ ಯನ್ನು ವಿಶೃಂಖಲಗೊಳಿಸುವುದಕ್ಕೆ, ನನ್ನ ದ್ವೇಷವನ್ನು ಊದಿ ಉರಿಸುವು ದಕ್ಕೆ . . . ಆದರೆ, ನಿನ್ನನ್ನು ಕಂಡ ಕ್ಷಣವೆ ಅದು ಎಷ್ಟು ಅಸಾಧ್ಯವೆಂಬುದನ್ನು ನಾನು ಕಂಡುಕೊಂಡೆ . . ." ಮತ್ತೆ "ನಿನ್ನನ್ನು ಈಡುಮಾಡಿದ ಈ ಕ್ರೂರ ಪರೀಕ್ಷೆಗಾಗಿ ನನ್ನನ್ನು ಕ್ಷಮಿಸುವೆಯ?" ಎಂದು ಯಾಚಿಸುತ್ತಾನೆ. ಬರ ಮಾಡಿಕೊಂಡವಳನ್ನು ಬಂದಂತೆಯೇ ಹಿಂದಕ್ಕೆ ಕಳಿಸಿಕೊಡುತ್ತಾನೆ.

ಆದರೆ, ಜನದ ಯೋಚನೆಯೇ ಒಂದು, ದೈವ ಬಗೆಯುವುದೇ ಬೇರೆ. ಫ್ಲಾರೆನ್ಸಿನ ಎರಡನೆಯ ನಿಯೋಗಿಯಾದ ಮಾಲಡ್ಯೂರ (Maladura) ಆ ಹೊತ್ತಿಗೆ ಸರಿಯಾಗಿ ಆರುನೂರು ಸೈನಿಕರೊಂದಿಗೆ ಬಂದಿದ್ದಾನೆ, ಪ್ರಿನ್ಸಿವಲ್ಲೆ ಯನ್ನು ರಾಜದ್ರೋಹಿಯೆಂದು ಸಾರಿದ್ದಾನೆ, ಟ್ರೈವಲ್ಸಿಯೋವನ್ನು ಹುಡುಕು ತ್ತಿದ್ದಾನೆ. ಪ್ರಿನ್ಸಿವಲ್ಲೆಯ ಗತಿ ಏನು? ಎಲ್ಲಿ ಅವನಿಗೆ ಆಶ್ರಯ?

ಆಗ ವನ್ನ ಅವನಿಗೆ ಆಶ್ರಯ ನೀಡುತ್ತಾಳೆ. ಪೀಸಾದ ರಕ್ಷಣೆಗೆ ಬೇಕಾದ ಅನ್ನಾಹಾರಗಳನ್ನೂ ಮದ್ದುಗುಂಡುಗಳನ್ನೂ ಪ್ರಿನ್ಸಿವಲ್ಲೆ ಕೊಟ್ಟು ಕಾಪಾಡಿ

ದ್ದಾನೆ. ಈಗ ಪೀಸಾ ಅವನಿಗೆ ರಕ್ಷಣೆ ಕೊಡಬೇಕಾದದ್ದು ನ್ಯಾಯ. ಪ್ರಿನ್‌ಸಿ ವಲ್ಲೆ ತನ್ನ ಸಂಗಡ ಬರಬೇಕು, ತಮ್ಮ ಅತಿಥಿಯಾಗಬೇಕು. ಅವನು ತನ್ನ ಮಾನಸಂರಕ್ಷಣೆ ಮಾಡಿ ಕಳಿಸಿರುವನೆಂದರೆ, ತನ್ನ ಗಂಡ ನಂಬುತ್ತಾನೆ. ನಂಬದೆ ಹೋದರೆ . . . ಛೆ, ಅದನ್ನು ಈಗ ಚಿಂತಿಸಲು ಸಮಯವಲ್ಲ. ಪ್ರಿನ್‌ಸಿವಲ್ಲೆ ನಿರ್ಯೋಚನೆಯಿಂದ ತನ್ನ ಜೊತೆಯಲ್ಲಿ ಬರಬೇಕು.

ಕೆಲವು ತಿಂಗಳುಗಳಿಂದಲೂ ಯಾರನ್ನು ಮುತ್ತಿ ಯಾರಿಗೆ ಅಪಾರವಾದ ನಷ್ಟವನ್ನು ಉಂಟುಮಾಡಿದ್ದಾನೋ ಆ ಪೀಸಾದವರ ಕೈಯಲ್ಲಿ, ಯಾರ ಪತ್ನಿ ಯನ್ನು ಬಯಸಿ ಬರಮಾಡಿಕೊಂಡನೋ ಆ ಗ್ವೀಡೊ ಕೊಲೊನ್ನನ ಮನೆಯಲ್ಲಿ ತನ್ನ ಜೀವವನ್ನು ನಂಬಿ ಇರಿಸಲು ಪ್ರಿನ್‌ಸಿವಲ್ಲೆ ಒಪ್ಪುತ್ತಾನೆ—ವೊನ್ನ ವನ್ನಳ ವಚನದ ಆಧಾರದ ಮೇಲೆ. ಅವನ ನಂಬಿಕೆಯ ಪರಮಾವಧಿಯನ್ನು ಕಂಡು ವನ್ನಳಿಗೆ ತುಂಬ ಸಂತೋಷವಾಗುತ್ತದೆ.

ಗುಡಾರದಿಂದ ಹೊರಗೆ ಬಂದರೆ, ಪೀಸಾ ನಗರವೆಲ್ಲ ದೇದೀಪ್ಯಮಾನ ವಾಗಿ ಬೆಳಗುತ್ತಿದೆ. ಅಲ್ಲಿನ ಜನಕ್ಕೆ ತಾವು ಬದುಕಿದೆವೆಂದು ಸಂತೋಷ, ಸಂಭ್ರಮ. ಆ ಬೆಳಕು ತನ್ನ ಮುಂದಿನ ಜೀವನದ ಮುಂಬೆಳಕು ಎಂಬಂತೆ ವನ್ನಳಿಗೆ ತೋರುತ್ತದೆ. ಅನಿವಾರ್ಯವೆಂದು ಒಪ್ಪಿ ಬಂದ ಗಂಡಾಂತರದಿಂದ ಈಷತ್ತೂ ಹಾನಿಯಾಗದೆ ಪಾರಾಗಿ, ತನ್ನ ನಗರದ ಪ್ರಜೆಗಳನ್ನು ಸಂರಕ್ಷಿಸಿದೆ ನಲ್ಲಾ ಎಂಬ ಸುಖದಿಂದ, ತನಗೆ ಆ ಸುಖವನ್ನು ಬಹು ಸುಲಭದ ಬೆಲೆಗೆ ಒದಗಿಸಿದವನಿಗೆ ತಾನು ರಕ್ಷಣೆ ಕೊಡುತ್ತಿರುವೆನೆಂಬ ಸುಖದಿಂದ, ವನ್ನ ಪ್ರಿನ್‌ಸಿ ವಲ್ಲೆಗೆ ಪ್ರತಿರೂಪವಾಗಿ ಹಣೆಯ ಮೇಲೆ ಒಂದು ಮುತ್ತಿಡುವಳು. "ಪ್ರೇಮವು ಆಶಿಪಡಬಹುದಾದ ಪರಮೋತ್ಕೃಷ್ಟವಾದ ಚುಂಬನ ಇದು" ಎಂದು ಪ್ರಿನ್‌ಸಿ ವಲ್ಲೆ ಅಷ್ಟಕ್ಕೆ ತೃಪ್ತಿಗೊಳ್ಳುತ್ತಾನೆ.

ಇಬ್ಬರೂ ಪೀಸಾದ ಕಡೆಗೆ ಹೋಗುತ್ತಾರೆ.

ಇಲ್ಲಿ ಎರಡನೆಯ ಅಂಕ ಮುಗಿಯಿತು.

ಮೂರನೆಯ ಅಂಕ ಆರಂಭವಾಗುವ ವೇಳೆಗೆ, ಮಾರ್ಕೊ ಮತ್ತು ಗ್ವೀಡೊ ಒಂದು ರಾತ್ರೆಯೆಲ್ಲ ನಿದ್ರೆಯಿಲ್ಲದೆ ವನ್ನಳ ಚಿಂತೆಯಲ್ಲಿ ಕಳೆದಿದ್ದಾರೆ. ವನ್ನ ಮಾನವುಳಿದು ಬರುವುದು ಸಾಧ್ಯವಿಲ್ಲವೆಂದು ಇಬ್ಬರಿಗೂ ಖಚಿತವಾಗಿದೆ.

"ನ್ಯಾಯಪರನಾಗಿರಬೇಕೆಂದು ಇಷ್ಟಪಡುವವನು, ತಾನು ಬದುಕಿರುವಷ್ಟು ಕಾಲವೂ, ಎರಡು ಮೂರು ಬೇರೆ ಬೇರೆ ಮಟ್ಟದ ಅನ್ಯಾಯಗಳಲ್ಲಿ ಯಾವುದು ಕಡಮೆಯ ಅನ್ಯಾಯವೆಂಬುದನ್ನು ವ್ಯಸನಪಡುತ್ತಲೇ ಆರಿಸಬೇಕಾಗಿ ಬರುತ್ತದೆ . . . ನಾವೆಲ್ಲರೂ ಅಪರಿಹಾರ್ಯವಾದ ಶಕ್ತಿಗಳ ಕೈಗೊಂಬೆಗಳಾಗಿರುವ ಅಸಹಾಯ ಪ್ರಾಣಿಗಳು" ಎಂದು ಮಾರ್ಕೊವಿಗೆ ಎನ್ನಿಸಿದೆ; ಅದರಂತೆ, ಪ್ರಕೃತ ಆಗಬೇಕಾಗಿದ್ದ ಎರಡು ಅನ್ಯಾಯಗಳಲ್ಲಿ ಇದೇ ಕಡಮೆಯದೆಂದು ಅವನ ವಿಶ್ವಾಸ; ಆದಕಾರಣ ವನ್ನಳ ಬಗೆಗೆ ಮಹಾಕ್ಷಮೆಯನ್ನು ತೋರುವುದು ಅವನಿಗೆ ಸಾಧ್ಯವಾಗಿದೆ. ಮಗನಿಗೂ ಅದನ್ನೇ ಬೋಧಿಸುತ್ತಾನೆ. ಆದರೆ, ಗ್ವೀಡೊ, ತನ್ನ ಪತ್ನಿಯು ಪರಪುರುಷನಿಂದ ಭಂಗಿತಳಾದಳೆಂದು ರಾತ್ರಿಯೆಲ್ಲ ಭ್ರಮಿಸಿ ಭ್ರಮಿಸಿ, ಅವನ ದ್ವೇಷ ಕುದಿದು ಉಕ್ಕಿ, ಪ್ರಿನ್‌ಸಿವಲ್ಲೆಯ ವಧೆಗೆ ಮನಸ್ಸು ಬಲಿದಿದೆ. ತಂದೆಯ ಅನುಭವದ ಮಾತು ಅವನಿಗೆ ರುಚಿಸುವುದಿಲ್ಲ, ಅರ್ಥವಾಗುವುದಿಲ್ಲ.

ಅಷ್ಟು ಹೊತ್ತಿಗೆ ವನ್ನ ಊರಿಗೆ ಬಂದಿದ್ದಾಳೆ. ಅವಳ ಬಗೆಗೆ ಊರಿನವರ ಮನಸ್ಸಿನಲ್ಲಿ ಬೇರೆ ಭಾವನೆಗೆ ಎಡೆಯೇ ಇಲ್ಲ, ಅವಳನ್ನು ತಮ್ಮ ಪಾಲಿನ ತಾರಿಣಿಯೆಂದು ಭಾವಿಸಿ, ವಿಜೃಂಭಣೆಯಿಂದ ಸ್ವಾಗತಿಸುತ್ತಿದ್ದಾರೆ.

ವನ್ನಳಿಗಾದರೋ, ಆದಷ್ಟು ಬೇಗ ಬಂದು, ಗ್ವೀಡೋವಿನ ಯಮಯಾತನೆಯನ್ನು ಹೋಗಲಾಡಿಸುವ ಕಾತರ. ಗ್ವೀಡೊ ನಿಜಸ್ಥಿತಿಯನ್ನು ಅರಿಯದವನು, ಅವನಿಗೆ ಅವಳ ಬಗ್ಗೆ ಅನಾದರವಾದರೂ, ಮಾರ್ಕೊ ಆದರದಿಂದ ಮುಂದುವರಿದು, ಅವಳನ್ನು ಆಲಿಂಗಿಸುತ್ತಾನೆ. ಬಲ್ಲವನಾದ ಅವನ ಕಣ್ಣಲ್ಲಿ ಅವಳು "ಜೂಡಿತ್ತಿಗಿಂತ ಸುಂದರಿಯಾದವಳು, ಲ್ಯೂಕ್ರಿಸಿಗಿಂತ ಪರಿಶುದ್ಧಳಾದವಳು!"

ವನ್ನಳಿಗೆ ಗ್ವೀಡೊ ಬೇಕಾದರೂ ಅವನಿಗೆ ಅವಳು ಬೇಕಾಗಿಲ್ಲ—ಹಿಂದಿನ ರಾತ್ರಿಯ ದುಃಖದಿಂದ, ದ್ವೇಷದಿಂದ, ಕ್ರೋಧದಿಂದ ಅವನ ಚಿತ್ತಸ್ವಾಸ್ಥ್ಯ ಅಸ್ತವ್ಯಸ್ತವಾಗಿದೆ. ಕೋಪದ ಹುಚ್ಚಿನಿಂದ, ಅಲ್ಲಿಗೆ ಬಂದಿದ್ದ ಪೌರರನ್ನೆಲ್ಲ ಓಡಿಸುವ ಸಂದರ್ಭದಲ್ಲಿ, ಕದಲದೆ ನಿಂತ ಪ್ರಿನ್‌ಸಿವಲ್ಲೆ ಅವನ ದೃಷ್ಟಿಗೆ ಬೀಳುತ್ತಾನೆ. ಮೊದಲು ಗುರುತಾಗುವುದಿಲ್ಲ—ಅವನ ಮುಖದ ಗಾಯಕ್ಕೆ ಕಟ್ಟಿದ ಬಟ್ಟೆಗಳು ಮರೆಯಾಗಿ. ಅವನು ಪ್ರಿನ್‌ಸಿವಲ್ಲೆ ಎಂದು

ತಿಳಿದ ಮೇಲೆ, ಅವನ ಉನ್ಮಾದದ ಸಂತೋಷ ನೋಡಬೇಕು! ತನಗೆ ದ್ರೋಹ ಮಾಡಿದವನನ್ನು ತನ್ನ ಹೆಂಡತಿ ತನ್ನ ಕೈಗೆ ಕರೆದು ತಂದಳೆಂದು ಹಿಗ್ಗುತ್ತಾನೆ. ಅವನ ತಿಳಿವಳಿಕೆ ತಪ್ಪು, ಅವನು ತನ್ನ ತಂಟೆಗೆ ಬರಲಿಲ್ಲ, ಅವನಿಗೆ ತಾನು ಆಶ್ರಯ ಕೊಡುವೆನೆಂದು ಕರೆದು ತಂದಿದ್ದೇನೆ ಎಂದು ವನ್ನ ಸಾರಿ ಸಾರಿ ಹೇಳಿದರೂ ಗ್ವೀಡೊ ನಂಬಲೊಲ್ಲ. ಕೊಂಚ ಕೊಂಚವಾಗಿ ವನ್ನ ಹೇಳಿದ್ದರಲ್ಲಿ ನಂಬಿಕೆ ಬಂದರೂ, ತನ್ನ ಹೆಂಡತಿಯ ಸತೀತ್ವ ಭಂಗವಾಗದೆ ಉಳಿದಿದೆಯೆಂದು ನಂಬಲಾರ. ಅವಳೇ ಆಣೆಯಿಟ್ಟು ಹೇಳಿದರೂ ಅವನಿಗೆ ನಂಬಿಕೆಯಾಗದು. ಪ್ರಿನ್ಸಿವಲ್ಲೆಯಿಂದ ತಾನು ಭ್ರಷ್ಟಳಾಗಿ, ಈಗ ಅವನ ಮೇಲಿನ ಮೋಹದಿಂದ ಅವನನ್ನು ಉಳಿಸಿಕೊಳ್ಳಲು ಸುಳ್ಳು ಹೇಳುತ್ತಿರುವಳೆಂದು ಅವನ ಹುಚ್ಚು ಬುದ್ಧಿ ಪಟ್ಟು ಹಿಡಿದಿದೆ. ನಂಬಲಾರ, ಖಂಡಿತ ನಂಬಲಾರ! ಯಾರು ತಾನೆ ನಂಬಿಯಾರು!

ಆದರೂ ನಂಬುವವನು ಒಬ್ಬ ಇದ್ದಾನೆ: ಮಾರ್ಕೊ. ವನ್ನ ಹೇಳಿದ ಮಾತಿನಲ್ಲಿ ಈ ವೃದ್ಧನಿಗೆ ತುಂಬ ವಿಶ್ವಾಸ. ಆದರೆ ಆ ತಂದೆಯ ಮಾತಿನಲ್ಲಿಯೇ ವಿಶ್ವಾಸವಿಲ್ಲ ಈ ಮಗನಿಗೆ!

ತನ್ನ ಮೇಲಿನ ಪ್ರೇಮದಿಂದ ತನ್ನ ಮಾತಿನಲ್ಲಿ, ತನ್ನ ಚಾರಿತ್ರದಲ್ಲಿ ತನ್ನ ಗಂಡನಿಗೆ ವಿಶ್ವಾಸವಿರುವುದೆಂಬ ಭರವಸೆಯಿಂದ ಪ್ರಿನ್ಸಿವಲ್ಲೆಯನ್ನು ವನ್ನ ಕರೆದುತಂದಳು. ಈಗ ನೋಡಿದರೆ, ತಾನಾಗಿ ಅವನನ್ನು ಸಾವಿನ ಸೆರೆಗೆ ತಂದಂತಾಯಿತು. ಇದುವರೆಗೆ ಪರಪುರುಷನೊಬ್ಬನು ಹಲವಾರು ವರ್ಷಗಳಿಂದ ತನಗಾಗಿ ಬೆಳೆಸಿದ್ದ ಪ್ರೇಮದ ಸಾರವನ್ನು ಕಂಡಿದ್ದಳು; ಈಗ ತನ್ನೊಡನೆ ಹಲವು ವರ್ಷ ಸಂಸಾರಮಾಡಿದ ತನ್ನ ಪುರುಷನ ಪ್ರೇಮದ ಸಾರವನ್ನು ಕಂಡುದಾಯಿತು. ಈಗ ಯಾವುದು ಕರ್ತವ್ಯ? ಇದ್ದುದನ್ನು ಇದ್ದಂತೆ ಸತ್ಯ ಹೇಳಿದರೆ, ಇವನು ನಂಬದೆ, ಅವನಿಗೆ ಹಾನಿಯಾಗುತ್ತದೆ. ಇಂಥ ಸಮಯದಲ್ಲಿ ಆಡಬಾರದ ಸುಳ್ಳು ಆಡಿದರೆ, ಅಡೆಯಬಾರದ ಅಪವಾದವನ್ನು ಮೇಲೆ ಎಳೆದುಕೊಂಡರೆ, ಆ ಜೀವವನ್ನು ಉಳಿಸಲು ಅವಕಾಶವಾಗಬಹುದು.

ಎಂದು ವನ್ನ, ಸುಳ್ಳು ಹೇಳುತ್ತಾಳೆ. ಪ್ರಿನ್ಸಿವಲ್ಲೆ ತನ್ನ ಮಾನಭಂಗ ಮಾಡಿದ, ನಿಜ; ಅದಕ್ಕೆ ಪ್ರತೀಕಾರವನ್ನು ತನ್ನ ಕೈಯಾರೆ ತಾನೆ ಮಾಡಬೇಕೆಂದು ಅವನನ್ನು ಕರೆದು ತಂದದ್ದು ಹೌದು; ಗ್ವೀಡೋವಿನ ಮನಸ್ಸಿಗೆ

ವೃಥಾ ನೋವಾಗಬಾರದೆಂದು ತಾನು ಮೊದಲು ಹಾಗೆ ಹೇಳಿದ್ದುಂಟು; ಆದರೆ ಆಗ ಹೇಳಿದ್ದು ಸುಳ್ಳು, ಈಗ ಹೇಳುವುದೇ ದಿಟ.

ಆಶ್ಚರ್ಯ! ತನ್ನ ಪ್ರೀತಿಯ ಪತ್ನಿ ಸತ್ಯ ಹೇಳಿದಾಗ ಅದನ್ನು ಸುಳ್ಳು ಎಂದವನು, ಅವಳು ಆಡಿದ ಸುಳ್ಳನ್ನು ಸತ್ಯವೆಂದುಕೊಳ್ಳುತ್ತಾನೆ, ಮತಿಹೀನ ಗ್ವೀಡೊ. ಅವಳು ಹೇಳುವ ಮಾತು ಸುಳ್ಳು ಎಂದು ಅವಳ ಅಪರಾಧವನ್ನು ನಿರಾಕರಿಸುವ ಪ್ರಿನ್‌ಸಿವಲ್ಲೆಯ ಕೂಗು ಆ ವಿಕಲಬುದ್ಧಿಯ ಕಿವಿಗೆ ತಾಕುವುದಿಲ್ಲ. ದ್ರೋಹಿಗೆ ತಾನು ಶಿಕ್ಷೆಮಾಡಿದರೂ ಒಂದೇ, ತನ್ನ ಹೆಂಡತಿ ಶಿಕ್ಷೆಮಾಡಿದರೂ ಒಂದೇ, ಎಂದು ಅವನಿಗೆ ಹಿಗ್ಗು.

ತಾನಾಗಿಯೇ ತನ್ನ ಹೆಂಡತಿಯ ಪ್ರೇಮವನ್ನು ಪ್ರಿನ್‌ಸಿವಲ್ಲೆಯ ಕಡೆಗೆ ತಿರುಗಿಸಿಕೊಟ್ಟು, ಅವಳಿಂದ ಈ ಸುಳ್ಳು ಹೇಳಿಸುತ್ತಿರುವೆನೆಂದು ಅವನು ಕಾಣ. ಅದು ಅರ್ಥವಾಗುವುದು ವೃದ್ಧ ಮಾರ್ಕೊ ಒಬ್ಬನಿಗೇ. "ಅರ್ಥ ವಾಯಿತು, ವನ್ನ, ನಿನ್ನ ಸುಳ್ಳು ಅರ್ಥವಾಯಿತು . . . ಇದು ನ್ಯಾಯವೂ ಹೌದು, ತುಂಬ ಅನ್ಯಾಯವೂ ಹೌದು . . . ಜನರು ಮಾಡುವ ಪ್ರತಿಯೊಂದರ ಹಾಗೆ . . . ಆದರೂ, ಯಾವುದು ಜೀವಕೊಡುತ್ತದೋ ಅದು ನ್ಯಾಯ ವಾದದ್ದು" ಎನ್ನುತ್ತಾನೆ.

ವನ್ನ ಈ ಸುಳ್ಳು ಹೇಳಿ, ಪ್ರಿನ್‌ಸಿವಲ್ಲೆಯನ್ನು ಸೆರೆಹಾಕಿದ ನೆಲಮಾಳಿ ಗೆಯ ಬೀಗದ ಕೈಯನ್ನು ಪಡೆದು, ಮರಣಕ್ಕೆ ಗುರಿಯಾದ ಅವನಿಗೆ ಜೀವ ಕೊಡಬೇಕೆಂದಿದ್ದಾಳೆ; ಅವನಿಗೆ ಜೀವದಾನಮಾಡಿ, ಗತಪ್ರಾಣವಾದ ತನ್ನ ಪ್ರೇಮಕ್ಕೆ ಪುನರ್ಜೀವ ಕೊಡಬೇಕೆಂದಿದ್ದಾಳೆ.

ಇದುವರೆಗಿನ ದುಃಸ್ವಪ್ನ ಮುಗಿದು, ಮುಂದೆ ಶುಭಸ್ವಪ್ನ ಆರಂಭವಾಗುವು ದೆಂಬ ಭರವಸೆಯಿಂದ ಮೊನ್ನ ವನ್ನ ನಾಟಕ ಮುಗಿಯುತ್ತದೆ.

೩

ಪೀಸಾ ನಗರಕ್ಕೂ ಫ್ಲಾರೆನ್ಸ್ ನಗರಕ್ಕೂ ಆದ ಯುದ್ಧ ಈ ನಾಟಕದ ಹಿನ್ನೆಲೆ. ಆ ಸಂದರ್ಭದಲ್ಲಿ ಒದಗಿದ ಒಂದಾನೊಂದು ಧರ್ಮಸಂಕಟ ಇದರ ವಸ್ತು. ಆ ಧರ್ಮಸಂಕಟದಲ್ಲಿ ಸಿಕ್ಕಿಕೊಂಡ ಒಂದು ನಾಲ್ಕು ಜೀವಗಳ ಧೈರ್ಯ ಸ್ಥೈರ್ಯ, ರಾಗ ವಿರಾಗ, ಸ್ವಾರ್ಥ ಪರಾರ್ಥ, ದಾಕ್ಷಿಣ್ಯ ನಿರ್ದಾಕ್ಷಿಣ್ಯ ಇವುಗಳ

ವಿಲಾಸದ ಚಿತ್ರಣವೆ ಇಲ್ಲಿನ ಸೊಗಸು. ಈ ಪ್ರಕರಣಗಳಲ್ಲಿ ಹೊಮ್ಮುವ ನ್ಯಾಯ ಅನ್ಯಾಯ, ಧರ್ಮ ಅಧರ್ಮ, ಋಜು ಕುಟಿಲ, ಸತ್ಯ ಅಸತ್ಯ ಮೊದಲಾದ ದ್ವಂದ್ವಗಳ ಸಾರಾಸಾರದ ವಿವೇಚನೆಯೇ ಇಲ್ಲಿನ ಪರಿಮಳ.

ಧರ್ಮಸಂಕಟಕ್ಕೆ ಸಿಲುಕಿದವರ ಕಥೆ ನಮಗೇನೂ ಹೊಸದಲ್ಲ. ರಾಮನು ಸೀತೆಯನ್ನು ಪರಿತ್ಯಾಗ ಮಾಡಿದ ಪ್ರಕರಣ, ಹರಿಶ್ಚಂದ್ರನು ಆಡಿದ ಮಾತನ್ನು ಉಳಿಸಿಕೊಳ್ಳುವುದಕ್ಕೋಸ್ಕರ ತನ್ನ ಪತ್ನೀಪುತ್ರರನ್ನು ವಿಕ್ರಯಮಾಡಿ ತಾನು ಅನಾಮಿಕನಿಗೆ ಆಳಾದದ್ದು, ಕರ್ಣನ ಜೀವನದಲ್ಲಿ ಕೃಷ್ಣ ಕುಂತಿಯರು ತಂದಿಟ್ಟ ಇಕ್ಕಟ್ಟು, ಅಲ್ಲಾವುದೀನನು ಚಿತ್ತೋರನ್ನು ಮುತ್ತಿದಾಗ ಪದ್ಮಿನಿಗೆ ಒದಗಬಹುದಾಗಿದ್ದ ಪಾಡು—ಇಂಥವು ಇನ್ನೂ ಎಷ್ಟೋ. ಆದರೆ ಅಲ್ಲಲ್ಲಿ ಏನೇನು ಪರಿಹಾರ ಒದಗಿ ಬಂತೋ ಅಲ್ಲಿಗೆ ಅದು ಒಂದೇ ಪರಿಹಾರವೆ? ಬೇರೆ ಮಾರ್ಗಾಂತರಗಳುಂಟೆ? ವಿಚಾರವಂತರಿಗೆ ಇದು ವಿಷಯ.

ಶ್ರೀ ರಾಮನು ಲೋಕಾಪವಾದ ಭೀತಿಯಿಂದ ಸೀತೆಯನ್ನು ಪರಿತ್ಯಾಗ ಮಾಡಿದ ಕತೆಯನ್ನು 'ಉತ್ತರ ರಾಮಚರಿತ'ವಾಗಿ ನಾಟಕಮಾಡಿದ ಭವಭೂತಿ ತನ್ನ ರಾಮನ ಮುಖದಿಂದ ಈ ಮಾತು ಹೇಳಿಸುತ್ತಾನೆ: "ಸತಾಂ ಕೇನಾಪಿ ಕಾರ್ಯೇಣ ಲೋಕಸ್ಯಾರಾಧನಂ ವ್ರತಮ್." ಎಂಥದೇ ಆದರೂ ಕಾರ್ಯಮಾಡಿ ಲೋಕಕ್ಕೆ ಪ್ರಸನ್ನತೆಯನ್ನು ಉಂಟುಮಾಡುವುದೇ ಸತ್ಪುರುಷರ ವ್ರತ. ಅಂಥ ವ್ರತಿಯಾದ ರಾಮನು ಒಮ್ಮೆ ಹೀಗೆ ಹೇಳುತ್ತಾನೆ :

ಸ್ನೇಹಂ ದಯಾಂ ಚ ಸೌಖ್ಯಂ ಚ ಯದಿ ವಾ ಜಾನಕೀಮಪಿ
ಆರಾಧನಾಯ ಲೋಕಾನಾಂ ಮುಂಚತೋ ನಾಸ್ತಿ ಮೇ ವ್ಯಥಾ

ಲೋಕದ ಆರಾಧನೆಗಾಗಿ ಸ್ನೇಹ, ದಯೆ, ಸೌಖ್ಯ, ಅಗತ್ಯ ಬಿದ್ದರೆ ಜಾನಕಿಯನ್ನೂ ಸಹ, ರಾಮನು ಬಿಟ್ಟು ತೊರೆಯುತ್ತಾನಂತೆ, ವ್ಯಥೆಪಡುವುದಿಲ್ಲವಂತೆ. ಹಾಗೆಯೇ ನಡೆಯಬೇಕಾದ ಹೊತ್ತು ಬಂದಾಗ ಬಿಟ್ಟು ತೊರೆಯುತ್ತಾನಾದರೂ ವ್ಯಥೆಪಡದೆ ಇರುವುದಿಲ್ಲ. ಈ ನಾಟಕದ ಮಾರ್ಕೊ ಮನೋಧರ್ಮದಲ್ಲಿ ಈ ರಾಮನಿಗೆ ಹೋಲಿಕೆಯಾಗುವವನು. ಇಲ್ಲಿಯ ಮೊನ್ನ ವನ್ನ ಕೂಡ, ಮಾವನಂತೆ ಅಷ್ಟು ಮಾತು ಆಡದಿದ್ದರೂ ತನ್ನ ಚರ್ಯೆಯಿಂದ ಅದೇ ಆರ್ಯಗಣಕ್ಕೆ ಸೇರಿದ ಜಾತಿಮುತ್ತು.

ಮಹಾಭಾರತ ಹೇಳಿದ ಮಹಾವಾಕ್ಯ ಜ್ಞಾಪಕವಾಗುತ್ತದೆ:

ತ್ಯಜೇತ್ ಕುಲಾರ್ಥೇ ಪುರುಷಂ ಗ್ರಾಮಸ್ಯಾರ್ಥೇ ಕುಲಂ ತ್ಯಜೇತ್
ಗ್ರಾಮಂ ಜನಪದಸ್ಯಾರ್ಥೇ ಆತ್ಮಾರ್ಥೇ ಪೃಥಿವೀಂ ತ್ಯಜೇತ್

ಮನೆಯನ್ನು ಉಳಿಸಲು ಮನೆಯ ಒಬ್ಬನನ್ನು ತೊರೆಯತಕ್ಕದ್ದು, ಗ್ರಾಮವನ್ನು ಉಳಿಸಲು ಮನೆಯನ್ನು ತೊರೆಯತಕ್ಕದ್ದು, ದೇಶಕ್ಕಾಗಿ ಗ್ರಾಮವನ್ನೂ ಆತ್ಮಕ್ಕಾಗಿ ದೇಶವನ್ನೂ ತೊರೆಯತಕ್ಕದ್ದು. ಮಹಾಭಾರತದ ಈ ಮಾತಿಗೂ ಮಾರ್ಕೋ ಈ ನಾಟಕದಲ್ಲಿ ಆಡುವ ಮಾತಿಗೂ ಭಾಷೆಯಲ್ಲಿ ಮಾತ್ರ ವ್ಯತ್ಯಾಸ. ಹೆಸಿಯಡ್, ಹೋಮರ್, ಪ್ಲೇಟೊ, ಅರಿಸ್ಟಾಟ್‌ಲ್ ಇವರ ವಚನಾಮೃತ ಪಾನಮಾಡಿದವನು ವಿದುರನಿಗೆ, ಭೀಷ್ಮನಿಗೆ ಸಮಾನಧರ್ಮ.

ಕರ್ಣನಿಗೂ ಹೀಗೇ ಧರ್ಮಸಂಕಟ ಬಂದಾಗ, ಅವನು ಅದನ್ನು ಹೇಗೆ ಪರಿಹರಿಸಿಕೊಂಡನೆಂಬುದನ್ನು ಪಂಪನ ಮಾತುಗಳಲ್ಲಿ ಕೇಳಿಕೊಳ್ಳಬಹುದು. ತಾನು ಪಾಂಡವನೆಂಬುದನ್ನು ತಿಳಿದ ಮೇಲೆ ಕೌರವನ ಪಕ್ಷವನ್ನು ಬಿಟ್ಟು ಹೋಗೋಣವೆ? ಕೂಡದು: 'ಆಳ್ದನುಮ್ ಎನ್ನನೆ ನಚ್ಚಿ ಪೆರ್ಚಿ ಮುಂ ಪೊರೆದನ್.' ಹಾಗಾದರೆ, ಅವನ ಕಡೆಯೆ ಇದ್ದು, ಪಾಂಡವರನ್ನು ಕೊಲ್ಲೋಣವೆ? ಅದು ಹೇಗಾದೀತು: 'ಇದಿರ್ಚಿ ಕಾದುವರುಂ ಎನ್ನಯ ಸೋದರರ್. ಎಂತು ನೋಡಿ ಕೊಕ್ಕರಿಸದೆ ಕೊಲ್ವೆನ್?' ಹಾಗಾದರೆ, ಮಾಡತಕ್ಕ ಕರ್ತವ್ಯ ಏನು? ಅದು ಒಂದೆ: 'ಎನ್ನ ಒಡಲಂ ಆಂ ತವಿಪೆಂ ರಣರಂಗಭೂಮಿಯೊಳ್!'

ಮಹಾಭಾರತವೂ ಮನುಧರ್ಮಶಾಸ್ತ್ರವೂ ಹೇಳುತ್ತದೆ:

ಸತ್ಯಂ ಬ್ರೂಯಾತ್ ಪ್ರಿಯಂ ಬ್ರೂಯಾತ್ ನ ಬ್ರೂಯಾತ್ ಸತ್ಯಮಪ್ರಿಯಂ
ಪ್ರಿಯಂ ಚ ನಾನೃತಂ ಬ್ರೂಯಾತ್ ಏಷ ಧರ್ಮಸ್ಸನಾತನಃ

ಸತ್ಯವನ್ನು ಹೇಳಬೇಕು, ಪ್ರಿಯವನ್ನು ಹೇಳಬೇಕು, ಅಪ್ರಿಯವಾದ ಸತ್ಯವನ್ನು ಹೇಳಬಾರದು, ಪ್ರಿಯವಾದ ಅಸತ್ಯವನ್ನೂ ಹೇಳಬಾರದು, ಇದು ಸನಾತನವಾದ ಧರ್ಮ. ಮಾತು ಚೆನ್ನಾಗಿದೆ, ಕಿವಿಗೆ ಇಂಪು, ಮನಸ್ಸಿಗೆ ಮೆಚ್ಚು, ನಡಸುವುದು ಕಠಿನ. ಆದರೂ ನಡಸಿದವರು ಉಂಟು. ಸತ್ಯವಂತರ ಸಾಲಿನಲ್ಲಿ ಉದಾಹರಣೆಯಾಗಿ ಹರಿಶ್ಚಂದ್ರನ ಕತೆ ಪರಮಾವಧಿ. ಆದರೆ ಇಲ್ಲಿ? ಸತ್ಯವನ್ನು

ಹೇಳಿದರೂ, ಅದನ್ನು ನಂಬದೆ, ಒಂದು ಹತ್ಯೆ ನಡೆದುಹೋಗುವಾಗ? ಸತ್ಯಕ್ಕೆ ಕಟ್ಟುಬಿದ್ದು ಒಂದು ಜೀವಹತ್ಯೆಯನ್ನು ಸಹಿಸಬೇಕೊ? ಅಥವಾ ಅಸತ್ಯಕ್ಕೆ ಜಾರಿದರೂ ಸರಿ, ಒಂದು ಜೀವವನ್ನು ಉಳಿಸಬೇಕೊ? ವಾರ್ಕೊ ಇದನ್ನು ಕುರಿತು ಮೂರನೆಯ ಅಂಕದ ಕೊನೆಗೆ ಏನು ವಾದಿಸುತ್ತಾನೊ ಅದನ್ನು ಶ್ರೀಕೃಷ್ಣನು ಅರ್ಜುನನಿಗೆ ಹೇಳಿದ ಮಾತುಗಳೊಡನೆ ಹೋಲಿಸಿ ನೋಡಬಹುದು.

ಕರ್ಣಪರ್ವದಲ್ಲಿ, ಧರ್ಮರಾಜನು ತನ್ನ ವೀರ್ಯವನ್ನು ಅಲ್ಲಗಳೆದನೆಂದು ಅರ್ಜುನನು, ತಾನು ಹಿಂದೆ ಮಾಡಿದ್ದ ಪ್ರತಿಜ್ಞೆಯನ್ನು ಉಳಿಸಿಕೊಳ್ಳುವುದಕ್ಕೋಸ್ಕರ ಅಣ್ಣನನ್ನೇ ಸಂಹರಿಸಿಬಿಡುವೆನೆಂದು ಕತ್ತಿಯೆತ್ತಿದಾಗ, ಶ್ರೀಕೃಷ್ಣನು ಅವನಿಗೆ ಹೇಳುತ್ತಾನೆ :

ಪ್ರಾಣಿನಾಂ ಹಿ ವಧಾತ್ತಾತ ವೃಥಾ ಧರ್ಮೋ ಮತೋ ಮಮ
ಅನೃತಂ ತು ಭವೇದ್ವಾಚ್ಯಂ ನ ತು ಹಿಂಸಾ ಕದಾಚನ

ಪ್ರಾಣಿವಧೆಯಿಂದ ಧರ್ಮ ವ್ಯರ್ಥವಾಗುವುದೆಂದು ನನ್ನ ಮತ. ಆಡಿದ್ದು ಸುಳ್ಳಾದರೂ ಆಗಬಹುದು, ಹಿಂಸೆ ಮಾತ್ರ ಎಂದಿಗೂ ಆಗಬಾರದು. ಮತ್ತೆ ಸತ್ಯ ಅಸತ್ಯಗಳನ್ನು ಕುರಿತು ಹೇಳುತ್ತಾನೆ :

ಸತ್ಯಸ್ಯ ವಚನಂ ಸಾಧು ನ ಸತ್ಯಾತ್ ವಿದ್ಯತೇ ಪರಮ್
ಸುದುರ್ವಿದಂ ಹಿ ತತ್ತ್ವೇನ ತತ್ಸತ್ಯಮಿತಿ ಮೇ ಮತಿಃ
ಭವೇತ್ಸತ್ಯಮವಕ್ತವ್ಯಂ ವಕ್ತವ್ಯಮನೃತಂ ಭವೇತ್
ತತ್ರಾನೃತಂ ಭವೇತ್ಸತ್ಯಂ ಸತ್ಯಂ ಚಾಪ್ಯನೃತಂ ಭವೇತ್

ಸತ್ಯವನ್ನು ಹೇಳುವುದು ಒಳ್ಳೆಯದು, ಸತ್ಯಕ್ಕಿಂತ ದೊಡ್ಡದು ತಿಳಿದುಬಂದಿಲ್ಲ. ಆ ಸತ್ಯವನ್ನು ಚೆನ್ನಾಗಿ ಯಥಾವತ್ತಾಗಿ ಕಾಣುವುದು ತುಂಬ ಕಷ್ಟವೆಂದು ನನ್ನ ಮತ. ಸತ್ಯವನ್ನು ಹೇಳದೆ ಇರಬೇಕು, ಅಸತ್ಯವನ್ನು ಹೇಳಲೆಬೇಕು, ಅಂತಹ ಸಂದರ್ಭದಲ್ಲಿ ಅಸತ್ಯವೇ ಸತ್ಯವಾಗುತ್ತದೆ, ಸತ್ಯವೇ ಅಸತ್ಯವಾಗುತ್ತದೆ. ಇದನ್ನೆ ನಾರಣಪ್ಪ ಕನ್ನಡದಲ್ಲಿ ಹೀಗೆ ಹೇಳಿಸುತ್ತಾನೆ : "ನುಡಿದ ಮಾತ್ರದಲಿರದು ಧರ್ಮದ ಬೆಡಗು, ತಾನದು ಬೇರೆ; ಸತ್ಯವ ನುಡಿದು ಕೆಟ್ಟವರುಂಟು; ಹಿಂಸಾಧರ್ಮವೃತ್ತಿಯಲಿ ನಡೆದು ಯಾವಜ್ಜೀವದಲಿ ಗತಿವಡೆದರುಂಟು." ಹೀಗೆಂದು ಕೃಷ್ಣನು 'ವಿತತಸತ್ಯದ ವಿಷಯಭೇದಸ್ಥಿತಿಯನರಿಯದೆ' ನಿಜವನ್ನು

ನುಡಿದು ಕೆಟ್ಟ ಕೌಶಿಕಮುನಿಯ ಕಥೆಯನ್ನು ಹೇಳುತ್ತಾನೆ. 'ಸತ್ಯದ ಹುರುಳ ನರಿಯದೆ ಕಾಳುಗೆಡೆದರೆ ಕಾರ್ಯವೆಂತಹುದು' ಎಂದು ಪ್ರಶ್ನಿಸಿ, ಬಳಾಕನೆಂಬ ವನಚರನ ವೃತ್ತಾಂತವನ್ನು ಉದಾಹರಿಸಿ 'ಹಿಂಸಾಪರನಹರ್ನಿಶವಾ ದುರಾತ್ಮನ ವರಿಸಿದರು ದೇವಾಂಗನೆಯರು' ಎನ್ನುತ್ತಾನೆ. ಕಡೆಗೆ "ಪರಮಧರ್ಮ ರಹಸ್ಯ ವಾವಂಗರಿಯಬಹುದೆಂದ."

ಮತ್ತೆ, ಹೆಂಡತಿ ಹೇಳಿದ ನಿಜವನ್ನು ನಂಬದ ಗ್ಲೀಡೊ ಮರುಕ್ಷಣದಲ್ಲೆ ಅವಳು ಹೇಳಿದ ಸುಳ್ಳನ್ನೆ ನಿಜವೆಂದು ನಂಬಿದನಲ್ಲಾ—ಇದನ್ನು ಕೇಳಿದರೆ, ಶಾಕುಂತಲ ನಾಟಕದ ಆರನೆಯ ಅಂಕದಲ್ಲಿ ದುಷ್ಯಂತನನ್ನು ಕುರಿತು ಸಾನುಮತಿ ಹೇಳಿದ್ದು ನೆನಪಾಗುತ್ತದೆ: 'ಸಮ್ಮೋಹಃ ಖಲು ವಿಸ್ಮಯನೀಯೋ ನ ಪ್ರತಿ ಬೋಧಃ.' ಎಂದರೆ, ತಿಳಿವಳಿಕೆಗಿಂತ ಮೌಢ್ಯವೇ ಆಶ್ಚರ್ಯಕಾರಕವಾಗಿದೆ.

ಈ ಎಲ್ಲ ಹೋಲಿಕೆಗಳಿಗಿಂತ ಹೆಚ್ಚು ಹತ್ತಿರವಾದದ್ದು ಚಿತ್ತೋರಿನ ಪದ್ಮಿನಿಯ ಕಥೆ. ಪದ್ಮಿನಿಯ ರೂಪಾತಿಶಯಗಳಿಗೆ ಮನಸ್ಸುಸೋತ ಅಲ್ಲಾವುದೀನ್ ಖಿಲ್ಜಿಯು ಮೋಸದಿಂದ ಪದ್ಮಿನಿಯ ಪತಿಯನ್ನು ಸೆರೆಹಿಡಿದು, ಆತನ ಬಿಡುಗಡೆಗೆ ಬೆಲೆಯಾಗಿ ಪದ್ಮಿನಿಯ ಸತೀತ್ವವನ್ನು ಕೇಳಿದನಲ್ಲಾ—ಆ ಪ್ರಕರಣ ದಲ್ಲಿ ಪದ್ಮಿನಿಯ ಧರ್ಮಸಂಕಟವನ್ನು ಶ್ರೀ ಚ. ವಾಸುದೇವಯ್ಯನವರು ತಮ್ಮ 'ಆರ್ಯಕೀರ್ತಿ'ಯಲ್ಲಿ ಹೀಗೆ ವರ್ಣಿಸುತ್ತಾರೆ: "ಪ್ರಾಣಾಧಿಕನಾದ ಪತಿ ಯನ್ನು ಉದ್ಧಾರಮಾಡುವುದೇ? ತನ್ನ ಸತೀತ್ವವನ್ನು ರಕ್ಷಿಸುವುದೇ? ಇವೆ ರಡರಲ್ಲಿ ಯಾವುದು ಕರ್ತವ್ಯ? ಪತಿಯು ಯಾವಜ್ಜೀವವೂ ಸೆರೆಯಲ್ಲಿರು ವುದೇ? ತಾನು ಸತೀಧರ್ಮವನ್ನು ಬಿಡುವುದೇ? ಈ ಎರಡು ಅನಿಷ್ಟಗಳಲ್ಲಿ ಯಾವುದು ಅನುಭೋಕ್ತವ್ಯ?" ಅಲ್ಲಿ ಅದು ಒಂದು ರೀತಿಯಾಗಿ ಪರಿಹಾರ ವಾಯಿತು. ರಾಜಪುತ್ರರು ತಮ್ಮ ರಾಣಿಯ ರಕ್ಷಣೆಗೆ ಜೀವವನ್ನು ಪಣವಾಗಿ ಇಟ್ಟು ಎದ್ದರು. ವೀರ ಬಾದಳನ ಶೌರ್ಯದ ಮುಂದೆ ಅಲ್ಲಾವುದೀನನ ಸೈನ್ಯ ನಿಲ್ಲಲಾರದೆ ಓಡಿತು. ಭೀಮಸಿಂಹನು ಸೆರೆಯಿಂದ ವಿಮುಕ್ತನಾದನು, ಪದ್ಮಿನಿಯ ಸತೀತ್ವವುಳಿಯಿತು. ಆದರೆ ಕಥೆ ಅಲ್ಲಿಗೆ ನಿಲ್ಲಲಿಲ್ಲ. ಮತ್ತೊಮ್ಮೆ ಅಲ್ಲಾವುದೀನ್ ದಂಡೆತ್ತಿ ಬಂದಾಗ, ಆರ್ಯಕೀರ್ತಿ ಹೇಳುತ್ತದೆ: "ಇನ್ನೊಂದು

ಸಾರಿ ವೀರಬಲಿಯಾಗಬೇಕಾಗಿ ಬಂದಿತು. ಬಲಿಯಂತೂ ಆಯಿತು; ಪಟ್ಟಣವು ಮಾತ್ರ ಉಳಿಯಲಿಲ್ಲ. ಸತ್ತ ಭಟರ ಸಂಖ್ಯೆ ಅಪರಿಮಿತವಾಯಿತು. ಪತಿಪರಾಯಣೆಯರಾದ ಚಿತ್ತೋರಿನ ವೀರರಮಣಿಯರು ಬಹುಕಾಲ ಪ್ರಚಲಿತವಾಗಿದ್ದ ಜಸರ್ ವ್ರತವನ್ನು ಮಾಡತೊಡಗಿದರು; ಅಗ್ನಿಕುಂಡವು ಸಿದ್ಧವಾಯಿತು; ಸಹಸ್ರ ಸಹಸ್ರ ವೀರಾಂಗನೆಯರು ಅಗ್ನಿಪ್ರವೇಶಮಾಡಿ ಕಳೇಬರವನ್ನು ಕಳೆದರು; ಅವರೊಳಗೆ, ಭುವನಮೋಹನಸುಂದರಿಯೂ ಧರ್ಮನಿಷ್ಠೆಯೂ ಆದ ಪದ್ಮಿನಿಯೊಬ್ಬಳು."

೪

ಧರ್ಮಸಂಕಟ ಒದಗಿದಾಗ ತಮ್ಮ ತನು ಮನ ಧನಗಳನ್ನು ಬಲಿಕೊಟ್ಟವರುಂಟು, ತಮ್ಮವರು ತಮ್ಮದು ಎಂಬ ಅಭಿಮಾನಗಳನ್ನು ಮೀರಿದವರು ಉಂಟು. ಆದರೆ, ಹೆಂಗಸಾದವಳು ತನ್ನ ಮಾನವನ್ನು–ಪ್ರಾಣವನ್ನಲ್ಲ, ಮಾನವನ್ನು—ಬಲಿಕೊಡಬೇಕಾದ ಪರಿಸ್ಥಿತಿ ಬಂದಾಗ, ಆ ಬಲಿದಾನದಿಂದ ಒಂದು ನಗರದ ಪ್ರಜೆಗಳಿಗೆ ಜೀವದಾನ ಮಾಡಬಹುದಾದ ಅವಕಾಶವಿರುವುದಾದರೆ, ಆಗ ಯಾವುದು ನ್ಯಾಯ? ಯಾವುದು ಧರ್ಮ? ಯಾವುದನ್ನು ಜನ ಮೆಚ್ಚಬೇಕು? ಯಾವುದನ್ನು ದೈವ ಒಪ್ಪುತ್ತದೆ? ಇಂತಹ ವಿಷಮವಾದ ಪರಿಸ್ಥಿತಿಯೊಳಗಿನ ಪ್ರಶ್ನೆಯನ್ನು ಕವಿ ಮ್ಯಾಟರ್‌ಲಿಂಕ್ ತನ್ನ "ಮೊನ್ನ ವನ್ನ" ನಾಟಕದಲ್ಲಿ ಎತ್ತಿಕೊಂಡು, ಚೇತೋಹಾರಿಯಾದ ನಾಟಕದ ರಚನೆಯಲ್ಲಿ ಬದುಕಿಗೆ ಬಲಕೊಡುವ ತತ್ತ್ವಗಳನ್ನು ವಿಚಾರಮಾಡುತ್ತಾನೆ. ವನ್ನ ಇಲ್ಲಿ ದುಷ್ಕಾರ್ಯವನ್ನು ಮಾಡಿದವಳಲ್ಲ, ದುಷ್ಕರವಾದದ್ದನ್ನು ಮಾಡಿದವಳು ಎಂದು ಪ್ರತಿಪಾದಿಸುತ್ತಾನೆ.

ವಿಚಾರಗರ್ಭವಾದ ಇಬ್ಸನ್ನಿನ 'ಸೂತ್ರದ ಬೊಂಬೆ,' ಹೌಸ್‌ಮನ್ನಿನ 'ಸೋಕ್ರಟೀಸನ ಮರಣ' ಇವುಗಳನ್ನು ಕನ್ನಡಿಸಿಕೊಟ್ಟ ಶ್ರೀ ಎಸ್. ಜಿ. ಶಾಸ್ತ್ರಿ ಅವರು ಮ್ಯಾಟರ್‌ಲಿಂಕನ 'ಮೊನ್ನ ವನ್ನ'ವನ್ನೂ ಕನ್ನಡಿಸಿರುವುದು ಯಥೋಚಿತವಾಗಿದೆ.

—**ಜಿ. ಪಿ. ರಾಜರತ್ನಂ**

## ಪಾತ್ರಗಳು

ಗ್ವೀಡೊ ಕೊಲೊನ್ನ, ಪೀಸಾನಗರದ ಸೈನ್ಯಾಧಿಕಾರಿ.

ಮಾರ್ಕೊ ಕೊಲೊನ್ನ, ಗ್ವೀಡೋವಿನ ತಂದೆ.

ಪ್ರಿನ್‌ಸಿವಲ್ಲೆ, ಫ್ಲಾರೆನ್ಸಿನ ಸಂಬಳದ ಸೇನಾಪತಿ.

ಬೋರ್ಸೊ,<br>ಟೊರೆಲ್ಲೊ, } ಗ್ವೀಡೋ ಕೈಕೆಳಗಿನ ದಳಪತಿಗಳು.

ಟ್ರೈವಲ್ಸಿಯೊ, ಫ್ಲಾರೆನ್ಸ್ ಜನರಾಜ್ಯದ ನಿಯೋಗಿ.

ವೀಡಿಯೊ, ಪ್ರಿನ್‌ಸಿವಲ್ಲೆಯ ಕಾರ್ಯದರ್ಶಿ.

ಗಯೊವನ್ನ (ಮೊನ್ನ ವನ್ನ), ಗ್ವೀಡೋವಿನ ಪತ್ನಿ.

ಕಾಲ—ಹದಿನೈದನೆಯ ಶತಮಾನದ ಅಂತ್ಯ.
ಮೊದಲನೆಯ ಮತ್ತು ಮೂರನೆಯ ಅಂಕಗಳು ಪೀಸಾದಲ್ಲಿ;
ಎರಡನೆಯದು ನಗರದ ಹೊರಗಡೆ.

# ಮೊನ್ನ ವನ್ನ

## ಒಂದನೆಯ ಅಂಕ

[ಗ್ವೀಡೊ ಕೊಲೊನ್ನ, ಅವನ ಅರಮನೆಯ ಒಂದು ಕೋಣೆ.]

[ಗ್ವೀಡೊ ಮತ್ತು ಅವನ ಸೇನಾಧಿಪತಿಗಳು, ಬೋರ್ಸೊ ಮತ್ತು ಟೊರೆಲ್ಲೊ ತೆರೆದ ಕಿಟಕಿಯ ಬಳಿ ನಿಂತಿದ್ದಾರೆ. ಅಲ್ಲಿಂದ ಪೀಸಾನಗರದ ಸುತ್ತು ಮುತ್ತಿನ ಪ್ರದೇಶವೆಲ್ಲ ಕಾಣುತ್ತಿದೆ.]

**ಗ್ವೀಡೊ:** ನಮಗೆ ಈಗ ಒದಗಿರುವ ದುರವಸ್ಥೆ ಎಷ್ಟೆಂದರೆ, ಇದುವರೆವಿಗೂ ನಮಗೆ ತಿಳಿಸದೆ ಮರೆಮಾಚಿದ್ದ ಅನಾಹುತಗಳನ್ನು ನಮ್ಮ ಮಂತ್ರಿಮಂಡಲವು ಈಗ ತಿಳಿಸಲೇಬೇಕಾಗಿ ಬಂದಿದೆ. ನಮ್ಮ ಸಹಾಯಕ್ಕಾಗಿ ವೆನಿಸ್ ನಗರವು ಕಳುಹಿಸಿದ ಎರಡು ಸೈನ್ಯಗಳನ್ನೂ ಫ್ಲಾರೆನ್ಸಿನವರು ಸುತ್ತುವರಿದಿದ್ದಾರೆ; ಒಂದನ್ನು ಬಿಬ್ಬಿಯೇನಾ ಹತ್ತಿರ, ಇನ್ನೊಂದನ್ನು ಎಲ್ಸೀ ಸಮೀಪದಲ್ಲಿ. ಛಿಯೂಸಿ, ಮಾಂಟಲೋನ್, ವರ್ನಿಯಾ ಮತ್ತು ಆರೆಸ್ಸೊ ಕಣಿವೆಗಳು, ಕ್ಯಾಸೆಂಟೈನ್ ಕಂದರಗಳು—ಇವೆಲ್ಲವೂ ಶತ್ರುವಶವಾಗಿವೆ. ನಾವೋ ಸಮಸ್ತ ಸಹಾಯದಿಂದಲೂ ಪ್ರತ್ಯೇಕಿಸಲ್ಪಟ್ಟು ನಿಸ್ಸಹಾಯರಾಗಿದ್ದೇವೆ, ಫ್ಲಾರೆನ್ಸಿನವರ ದ್ವೇಷಕ್ಕೆ ತುತ್ತಾಗಿದ್ದೇವೆ; ಅಂಜಿಕೆಯಿನ್ನು ಇಲ್ಲದಿರುವಾಗ ಫ್ಲಾರೆನ್ಸ್ ಯಾರನ್ನೂ ಕ್ಷಮಿಸುವುದಿಲ್ಲ. ಈ ವಿಪತ್ತುಗಳನ್ನು ನಮ್ಮ ಸೈನಿಕರೂ, ಪ್ರಜೆಗಳೂ ಇನ್ನೂ ಅರಿಯರು; ಆದರೆ ವಿಚಿತ್ರವಾದ ಕಿಂವದಂತಿಗಳು ಹರಡುತ್ತಿವೆ, ದಿನದಿನಕ್ಕೂ ಖಚಿತವಾಗುತ್ತಿವೆ. ನಿಜಸ್ಥಿತಿಯನ್ನು ತಿಳಿದಾಗ, ಪೀಸಾದವರು ಏನು ಮಾಡುವರೊ? ಅವರ ರೋಷವು ನಮ್ಮ ಮೇಲೆ, ಮಂತ್ರಿಮಂಡಲದ ಮೇಲೆ ತಿರುಗುವುದು; ಅವರ ಭೀತಿಗೂ ಕಣ್ಣು ಕಾಣದ ನಿರಾಶೆಗೂ ನಾವು ಮೊದಲನೆಯ ಬಲಿಯಾಗುತ್ತೇವೆ. ಮೂರು ತಿಂಗಳಿಗೂ ಮೇಲ್ಪಟ್ಟು ನಡೆದಿರುವ ಈ ದೀರ್ಘವಾದ ಮುತ್ತಿಗೆಯಲ್ಲಿ ಅವರು ಎಷ್ಟೋ ಸಹಿಸಿದ್ದಾರೆ; ಕಷ್ಟನಷ್ಟಗಳನ್ನು ಅಷ್ಟು ಧೀರರಾಗಿ ಅನುಭವಿಸಿದ್ದಾರೆ; ಇನ್ನು ಕ್ಷಾಮವೂ ಸಂಕಟವೂ ಅವರನ್ನು ಹುಚ್ಚಿಗಟ್ಟಿದರೆ, ನಮಗೇನೂ ಆಶ್ಚರ್ಯವಿಲ್ಲ. ಅವರಿಗೆ ಒಂದು

ಆಸೆ ಉಳಿದಿತ್ತು; ಅದು ಹೋಯಿತು, ಅದರೊಡನೆಯೇ ನಮ್ಮ ಅಧಿಕಾರದ ಕಡೆಯ ಅವಶೇಷವೂ ಹೋಯಿತು. ಇನ್ನು ನಮ್ಮ ಕೈ ನಡೆಯುವಂತಿಲ್ಲ. ಶತ್ರುವಂತೂ ನಮ್ಮ ಕೋಟೆಯ ಗೋಡೆಗಳನ್ನು ಧೂಳಿಪಟ ಮಾಡುತ್ತಾನೆ, ಪೀಸಾ ನಿರ್ನಾಮವಾಗುತ್ತದೆ . . .

**ಬೋರ್ಸೊ:** ನನ್ನ ಬಂಟರು ತಮ್ಮ ಕೊನೆಯ ಬಾಣವನ್ನು ಎಸೆದಾಯಿತು; ಅವರ ಮದ್ದುಗುಂಡು ಮುಗಿದುಹೋಯಿತು. ಉಗ್ರಾಣವನ್ನು ಈ ಕೊನೆಯಿಂದ ಆ ಕೊನೆಯವರೆಗೆ ಹುಡುಕಿದರೂ ಒಂದು ಚಟಾಕು ಮದ್ದು ಸಿಕ್ಕುವಂತಿಲ್ಲ . . .

**ಟೊರೆಲ್ಲೊ :** ಮೊನ್ನೆ ದಿನವೇ ನಾವು ನಮ್ಮ ಕಡೆಯ ಸಿಡಿಗುಂಡನ್ನು ಸಂಟ್ ಆಂಟೋನಿಯೋ ಫಿರಂಗಿತಂಡದ ಮೇಲೆ ಪ್ರಯೋಗಿಸಿಯಾಯಿತು. ಸ್ಟ್ರಾಡಿಯೋಟಿ ದಳದವರು ಕೂಡ, ಖಡ್ಗವೊಂದು ಹೊರತು ಬೇರೇನೂ ಅವರಿಗೆ ಉಳಿದಿಲ್ಲ, ಅವರೂ ಬತೇರಿಯ ಕಾವಲಿಗೆ ಹೋಗಲು ನಿರಾಕರಿಸುವರು . . .

**ಬೋರ್ಸೊ :** ಪ್ರಿನ್ಸಿವಲ್ಲೆಯ ಫಿರಂಗಿಗುಂಡು ನಮ್ಮ ಕೋಟೆಯ ಗೋಡೆಯಲ್ಲಿ ಮಾಡಿರುವ ರಂಧ್ರವನ್ನು ಈ ಕಿಟಕಿಯಿಂದ ಕಾಣಬಹುದು . . . ಐವತ್ತು ಹಜ್ಜೆ ಅಗಲವಿದೆ, ಒಂದು ಹಿಂಡು ಕುರಿ ಸುಲಭವಾಗಿ ಹಾಯಬಹುದು . . . ನಗರವನ್ನು ಕಾಪಾಡಲಾಗದು; ಶರಣಾಗತಿಪತ್ರಕ್ಕೆ ಈ ರಾತ್ರೆ ರುಜು ಹಾಕದಿದ್ದರೆ, ರೋಮನ್ನಿಯಸ್ ಸ್ಕ್ಲವೋನಿಯಸ್ ಅಲ್ಬೇನಿಯಸ್ ದಳದವರೆಲ್ಲ ಒಂದೇ ಮೈಯಾಗಿ ಸೈನ್ಯವನ್ನು ಬಿಟ್ಟುಹೋಗುವೆವೆಂದು ತಿಳಿಸಿದ್ದಾರೆ . . .

**ಗ್ವೀಡೊ :** ಕಳೆದ ಹತ್ತು ದಿನಗಳಲ್ಲಿ, ಮೂರು ಸಾರಿ, ಮಂತ್ರಿಮಂಡಲವು ಪುರಪ್ರಮುಖರ ಹಿರಿಯರನ್ನು ಸಂಧಾನಕ್ಕಾಗಿ ಕಳುಹಿಸಿದೆ. ಅವರಲ್ಲಿ ಯಾರೂ ಹಿಂದಿರುಗಿ ಬಂದಿಲ್ಲ . . .

**ಟೊರೆಲ್ಲೊ :** ರೋಷೋನ್ಮತ್ತರಾದ ನಮ್ಮ ರೈತರು ನಮ್ಮ ನಗರದ ಬೀದಿಗಳಲ್ಲಿ ತನ್ನ ಸೇನಾಪತಿಯಾದ ಆಂಟೋನಿಯೋ ರೀನೋವನ್ನು ಕೊಚ್ಚಿ ಕೊಂದರಲ್ಲವೆ; ಪ್ರಿನ್ಸಿವಲ್ಲೆ ಅದಕ್ಕಾಗಿ ನಮ್ಮನ್ನು ಕ್ಷಮಿಸುವುದಿಲ್ಲ. ಈ ಕೊಲೆಯನ್ನು ನೆಪಮಾಡಿಕೊಂಡು, ಫ್ಲಾರೆನ್ಸ್ ನಮ್ಮನ್ನು ಶಾಸನಬಾಹಿರರೆಂದು ಘೋಷಿಸಿ, ನಮ್ಮನ್ನು ಅನಾಗರಿಕರೆಂಬಂತೆ ಕಾಣುವರು . . .

**ಗ್ವೀಡೊ :** ಹಸಿವಿನಿಂದ ಹುಚ್ಚೆದ್ದ ಮಂದಿಯನ್ನು ಹತೋಟಿಯಲ್ಲಿ ಡುವುದು ನಮ್ಮ ಕೈಮೀರಿತ್ತು ಎಂಬುದನ್ನು ವಿವರಿಸಿ, ನಮ್ಮ ಗಾಢವಾದ ಸಂತಾಪವನ್ನು ತಿಳಿಸಲು ಪ್ರಿನ್ಸಿವಲ್ಲೆಯ ಬಳಿಗೆ ನನ್ನ ತಂದೆಯನ್ನೇ ಕಳುಹಿದ್ದೇನೆ. ನನ್ನ ತಂದೆಯು ರಕ್ಷಾರ್ಹನಾದ ದೂತನಾಗಿ ಹೋದವನು, ಅವನು ಇನ್ನೂ ಹಿಂದಿರುಗಿಲ್ಲ . . .

**ಬೋರ್ಸೊ :** ಒಂದು ವಾರಕ್ಕೆ ಮೇಲ್ಪಟ್ಟು ನಮ್ಮ ನಗರವು ತಡೆಗಟ್ಟಿಲ್ಲದೆ ಹೋಗಿದೆ, ಯಾವ ಕಡೆಯಿಂದ ಯಾರಾದರೂ ಪ್ರವೇಶಿಸಬಹುದು; ನಮ್ಮ ಕೋಟೆಗಳೆಲ್ಲ ಪುಡಿಯಾಗಿ ಪಾಳುಬಿದ್ದಿವೆ, ನಮ್ಮ ಫಿರಂಗಿಗಳ ಸದ್ದು ಅಡಗಿದೆ. ಹೀಗಿದ್ದರೂ, ಪ್ರಿನ್ಸಿವಲ್ಲೆ ಮುತ್ತಿಗೆಗೆ ಏಕೆ ಆಜ್ಞೆ ಮಾಡಿಲ್ಲ? ಅವನಿಗೇನಾದರೂ ಧೈರ್ಯ ಕುಂದಿತೋ, ಅಥವಾ ನಾವು ಮರೆಯಿಂದ ಮೇಲೆ ಬೀಳಬಹುದೆಂದು ಅವನಿಗೆ ಭಯವೊ? ಬಹುಶಃ, ಫ್ಲಾರೆನ್ಸ್ ಏನಾದರೂ ಗುಪ್ತವಾದ ಆಜ್ಞೆಗಳನ್ನು . . .

**ಗ್ವೀಡೊ :** ಫ್ಲಾರೆನ್ಸಿನ ಆಜ್ಞೆಗಳು ಸದಾ ಗುಪ್ತವಾದುವೇ ಆದರೂ, ಅವರ ಒಳಸಂಚು ಮಾತ್ರ ಸ್ಪಷ್ಟ. ವೆನಿಸ್ ರಾಜ್ಯಕ್ಕೆ ಪೀಸಾನಗರವು ತೋರಿಸುತ್ತಿರುವ ಸ್ಥಿರವಾದ ರಾಜಭಕ್ತಿಯು ಟಸ್ಕನ್ ಪ್ರದೇಶದಲ್ಲಿರುವ ಸಣ್ಣಪುಟ್ಟ ನಗರಗಳಿಗೆ ಮೇಲ್ಪಂಕ್ತಿಯಾಗಿ, ಅದರಿಂದ ಫ್ಲಾರೆನ್ಸಿಗೆ ಅಪಾಯ; ಆದ್ದರಿಂದ ಪೀಸಾನಗರದ ಪ್ರಜಾರಾಜ್ಯ ಇಲ್ಲವಾಗಬೇಕು . . . ಫ್ಲಾರೆನ್ಸ್ ಅಪೂರ್ವವಾದ ಚಾತುರ್ಯವನ್ನೂ ಯುಕ್ತಿಯನ್ನೂ ತೋರಿಸಿದೆ. ತನ್ನ ನಿರ್ದಯೆಯ ಪ್ರತೀಕಾರವನ್ನು ಸಮರ್ಥಿಸಿಕೊಳ್ಳುವುದಕ್ಕೋಸ್ಕರ, ಕೊಂಚಕೊಂಚವಾಗಿ, ಈ ಯುದ್ಧದಲ್ಲಿ ವಿರಸವನ್ನು ಬಿತ್ತಿ, ವಿಚಿತ್ರವಾದ ಮೋಸದ ಕ್ರೌರ್ಯದ ಕೃತ್ಯಗಳಿಂದ ವಿಷವನ್ನು ಹಿಂಡುವುದಕ್ಕೆ ದಾರಿಮಾಡಿಕೊಂಡಿದೆ. ನಮ್ಮ ರೈತಾಪಿ ಜನರು ರೀನೋವನ್ನು ಕೊಲೆಮಾಡುವಂತೆ ಫ್ಲಾರೆನ್ಸಿನ ಕಡೆಯವರೇ ಚಿತಾಯಿಸಿದರೆಂದು ನಾನು ಶಂಕಿಸುವುದಕ್ಕೆ ಕಾರಣವಿಲ್ಲದೆ ಇಲ್ಲ. ಅದರಂತೆಯೇ, ಈ ಮುತ್ತಿಗೆಯನ್ನು ಪ್ರಿನ್ಸಿವಲ್ಲೆಗೆ ಒಪ್ಪಿಸಿದ್ದು ಕೂಡ ಅದೇ ಕಾರ್ಯಾಲೋಚನೆಯ ಒಂದು ಅಂಗ. ಅವನಾದರೂ ಎಂಥವನು! ಹಣಕ್ಕಾಗಿ ಅವರ ಬಳಿ ಜೀತಕ್ಕೆ ಸೇರಿರುವ ಪರಮರೂಕ್ಷ! ಪ್ಲಸೆನ್ಸಾ ಪಟ್ಟಣವನ್ನು ಲೂಟಿಮಾಡಿದಾಗ, ಶಸ್ತ್ರಾಸ್ತ್ರ ಹಿಡಿದ ಪ್ರತಿಯೊಬ್ಬರನ್ನೂ ಕತ್ತಿಗೆ ಕೊಟ್ಟನೆಂದು ದುಷ್ಟಪ್ರಸಿದ್ಧಿ

ಸಂಪಾದಿಸಿದವನು. ಹಾಗಾದದ್ದು ತನ್ನ ಆಜ್ಞೆಗೆ ವಿರುದ್ಧವಾಗಿ, ಎಂದು ಅನಂತರ ಹೇಳಿಕೊಂಡ, ನಿಜ. ಮತ್ತೆ, ಐದು ಸಾವಿರ ಸ್ವತಂತ್ರರಾದ ಸ್ತ್ರೀಯರನ್ನು ಗುಲಾಮಗಿರಿಗೆ ಮಾರಿದವನು . . .

**ಬೋರ್ಸೊ :** ವರದಿಯೇನೋ ಹಾಗೆ, ಎಂದು ಗೊತ್ತು ; ಆದರೂ ಅದು ಸರಿಯಲ್ಲ. ಆ ಕೊಲೆಗೂ ಆ ಮಾರಾಟಕ್ಕೂ ಫ್ಲಾರೆನ್ಸಿನ ಪ್ರಜಾಪ್ರಮುಖ ಮಂಡಲಿ ಹೊಣೆಗಾರರೇ ವಿನಾ ಪ್ರಿನ್ಸಿವಲ್ಲೆಯಲ್ಲ. ನಾನೆಂದೂ ಪ್ರಿನ್ಸಿವಲ್ಲೆಯನ್ನು ನೋಡಿಲ್ಲ, ಆದರೆ ನನ್ನ ಸೋದರನೊಬ್ಬ ಅವನನ್ನು ಚೆನ್ನಾಗಿ ಬಲ್ಲ. ಹುಟ್ಟಿನಿಂದ ಅವನು ಪರದೇಶದವನು. ಅವನ ತಂದೆ—ಬಾಸ್ಕ್ ಅಥವಾ ಬ್ರೆಟನ್ ಜನಾಂಗಕ್ಕೆ ಸೇರಿದವನೆಂದು ತೋರುತ್ತೆ—ವೆನಿಸ್‌ನಗರದಲ್ಲಿ ಅಕ್ಕಸಾಲೆಯ ಅಂಗಡಿಯಿಟ್ಟಿದ್ದನಂತೆ. ಅವನು ಸಾಮಾನ್ಯ ಕುಟುಂಬದಲ್ಲಿ ಹುಟ್ಟಿದನೆಂಬುದು ಖಂಡಿತವಾದರೂ, ಅವನು ಜನ ಹೇಳುವಂಥ ಕ್ರೂರಿಯಲ್ಲ. ನಾನು ಕೇಳಿರುವ ಮಟ್ಟಿಗೆ, ಅವನೊಂದು ಅಪಾಯಕರವಾದ ಪ್ರಾಣಿಯೇ, ಅಷ್ಟೇನೂ ಶೀಲವಂತನಲ್ಲ, ಹುಚ್ಚುಹುಚ್ಚು, ತುಂಬ ಕೋಪ ; ಆದರೂ, ಇಷ್ಟೆಲ್ಲಾ ಇದ್ದರೂ, ನಂಬಿಕಸ್ತ ; ಬೇಕಾದರೆ, ಹಿಂದುಮುಂದು ನೋಡದೆ, ನನ್ನ ಕತ್ತಿಯನ್ನಾದರೂ ಅವನಿಗೆ ಒಪ್ಪಿಸಿಬಿಟ್ಟೇನು . . .

**ಗ್ವೀಡೊ :** ಆಗಲಿ. ಕತ್ತಿಯನ್ನು ಬೀಸಲು ಕೈಲಾಗದೆ ಹೋಗುವವರೆಗೆ ತಾಳು ! ಇಷ್ಟರಲ್ಲಿಯೇ ಇನ್ನೇನು, ಅವನು ತನ್ನ ಚಟುವಟಿಕೆಯನ್ನು ಆರಂಭಿಸಿ, ತನ್ನ ನಿಜ ಸ್ವಭಾವವನ್ನು ತೋರಿಸಿಯಾನು ! ಈ ಮಧ್ಯೆ ನಮಗೆ ಉಳಿದಿರುವುದು ಒಂದೇ ಅವಕಾಶ : ಸಾವಿಗೆ ಅಂಜದೆ ಧೈರ್ಯವಾಗಿ ಅದನ್ನು ಎದುರಿಸಿ, ಅದರ ಮುಖ ನೋಡಲಾಪವರು ನಾವು ಯಾರಾದರೂ . . . ಸೈನಿಕರಿಗೂ ನಗರದವರಿಗೂ ನಮ್ಮ ಕೋಟೆಯಲ್ಲಿ ಆಶ್ರಯಕ್ಕೆ ಬಂದಿರುವ ರೈತರಿಗೂ ಈಗಿನ ಸತ್ಯಸ್ಥಿತಿಯೇನೆಂಬುದನ್ನು ಸಂಪೂರ್ಣವಾಗಿ ತಿಳಿಸಿಬಿಡಬೇಕು. ಶರಣಾಗತಿಗೆ ಇದು ಷರತ್ತು ಎಂದು ಅವರೇನೂ ಸೂಚಿಸಿಲ್ಲವೆಂಬುದು ಇವರಿಗೆ ತಿಳಿಯಬೇಕು. ಎರಡು ದೊಡ್ಡ ಸೈನ್ಯ ಬೆಳಗಿನಿಂದ ಸಂಜೆಯವರೆಗೆ ಕಾದಾಡಿದರೂ ರಣರಂಗದಲ್ಲಿ ಮೂವರು ಗಾಯಗೊಂಡು ಬಿದ್ದರು, ಎಂಬಂತಹ ಅಣಕುಕಾಳಗವಲ್ಲ ಇದು, ಎಂಬುದೂ ಇವರಿಗೆ ತಿಳಿಯಬೇಕು. ಸೋತವನು ಗೆದ್ದವನಿಗೆ ಅತಿಥಿಯಾಗಿ ಅವನ ಆಪ್ತಮಿತ್ರನಾಗುವಂತಹ ಭ್ರಾತೃತ್ವದ

ಮುತ್ತಿಗೆಯಲ್ಲ ಇದು, ಎಂಬುದನ್ನೂ ಇವರು ಅರಿಯಲಿ. ಇದು ಅತ್ಯುಗ್ರ ವಾದ ಹೋರಾಟ; ಇದರಲ್ಲಿ ಬದುಕಬೇಕು, ಇಲ್ಲವೆ ಸಾಯಬೇಕು. ಈ ಹೋರಾಟದಲ್ಲಿ ದಯೆಯೆಂಬುದು ದೊರಕದು; ಇದರಲ್ಲಿ ನಮ್ಮ ಹೆಂಡಿರೂ ಮಕ್ಕಳೂ . . .

[ಮಾರ್ಕೊ — ಪ್ರವೇಶ. ಗ್ವೀಡೋ ಅವನನ್ನು ಕಾಣುವನು, ಅವನನ್ನು ಆಲಿಂಗಿಸಲು ಕಾತರದಿಂದ ಮುಂದುವರಿಯುವನು.]

**ಗ್ವೀಡೊ :** ಅಪ್ಪಾ! . . . ಏನಿದು ಸಂತೋಷದ ಪವಾಡ! ನಮ್ಮ ಈ ದುರ್ದೆಶೆಯಲ್ಲಿ, ನಿನ್ನ ಆಶೆಯನ್ನೇ ತೊರೆದಿದ್ದಾಗ, ಯಾವ ಸೌಭಾಗ್ಯದ ಫಲದಿಂದ ನೀನು ನಮಗೆ ಮರಳಿ ಬಂದೆ! . . . ಗಾಯವಾಗಿಲ್ಲ ತಾನೆ? ಕಾಲೆಳೆದುಕೊಂಡು ಬರುತ್ತಿದ್ದೀಯಲ್ಲ! ಚಿತ್ರಹಿಂಸೆ ಮಾಡಿದರೆ? ಹೇಗೆ ತಪ್ಪಿಸಿ ಕೊಂಡೆ? ಏನು ಮಾಡಿದರು ನಿನಗೆ?

**ಮಾರ್ಕೊ :** ಏನೂ ಇಲ್ಲ. ಅವರು ಕಾಡುಜನರಲ್ಲವೆಂಬುದು ದೇವರ ದಯೆ. ಮಾನ್ಯನಾದ ಅತಿಥಿಯಂತೆ ಅವರು ನನ್ನನ್ನು ಬರಮಾಡಿಕೊಂಡರು. ಪ್ರಿನ್ಸಿವಲ್ಲೆಯು ನನ್ನ ಕೃತಿಗಳನ್ನು ಓದಿದ್ದಾನೆ; ನಾನು ಕಂಡುಹಿಡಿದು ಅನುವಾದ ಮಾಡಿದ್ದ ಪ್ಲೇಟೋವಿನ ಮೂರು ಸಂವಾದಗಳನ್ನು ಕುರಿತು ನನ್ನಲ್ಲಿ ಪ್ರಸ್ತಾಪಿಸಿದ. ನನಗೆ ಕಾಲು ಕುಂಟು, ನಿಜ, ಆದರೂ ಬಹು ದೂರ ಹೋಗಬೇಕಾಗಿತ್ತು, ಜೊತೆಗೆ ನಾನು ತುಂಬ ಮುದುಕ . . . ಪ್ರಿನ್ಸಿವಲ್ಲೆಯ ಗುಡಾರದಲ್ಲಿ ನಾನು ಯಾರನ್ನು ಕಂಡೆ, ಗೊತ್ತೆ?

**ಗ್ವೀಡೊ :** ನಿಷ್ಕರುಣಿಗಳಾದ ಫ್ಲಾರೆನ್ಸಿನ ಪುರಪ್ರಮುಖ ಮಂಡಲಿ ಯವರನ್ನು!

**ಮಾರ್ಕೊ :** ಹೌದು, ಅವರು ಅಲ್ಲಿದ್ದರು—ಅಲ್ಲ, ಅವರಲ್ಲಿ ಒಬ್ಬ ಮಾತ್ರ. ಏಕೆಂದರೆ ನಾನು ನೋಡಿದ್ದು ಒಬ್ಬನನ್ನೇ . . . ಆದರೆ, ನಾನು ಮೊದಲು ಕೇಳಿದ ಹೆಸರು ಮಾರ್ಸಿಲಿಯೋ ಫಿಸೀನೋದು; ಪ್ಲೇಟೋ ವನ್ನು ಜಗತ್ತಿಗೆ ಪ್ರಕಟ ಮಾಡಿದವನು ಅವನೇ . . . ಪ್ಲೇಟೋ ಮಾರ್ಸೀ ಲಿಯೋ ಫಿಸೀನೋವಿನಲ್ಲಿ ಪುನರ್ಜನ್ಮ ಎತ್ತಿದಂತಿದೆ . . . ನಾವೆಲ್ಲರೂ ಎಲ್ಲಿಗೆ ಹೋಗಲೇಬೇಕೋ ಅಲ್ಲಿಗೆ ಹೋಗುವ ಮೊದಲು ಅವನನ್ನು ಕಾಣುವುದಕ್ಕೆ ನನ್ನ ಆಯುಸ್ಸಿನ ಹತ್ತು ವರ್ಷಗಳನ್ನು ಧಾರೆಯೆರೆಯಲು ಸಿದ್ಧನಾಗಿದ್ದೆ . . .

ಕೊನೆಗೂ ಜೊತೆಕೂಡಿದ ಇಬ್ಬರು ಸೋದರರಂತಿದ್ದೆವು ನಾವು . . . ಹೆಸಿಯಡ್, ಹೋಮರ್, ಅರಿಸ್ಟಾಟಲ್ ಇವರನ್ನು ಕುರಿತು ಮಾತನಾಡಿದೆವು . . . ಪಾಳೆಯದ ಬಳಿಯೇ, ಆರ್ನೋನದಿಯ ದಂಡೆಯ ಹತ್ತಿರ, ಆಲೀವ್ ಮರಗಳ ತೋಪಿನಲ್ಲಿ, ಮರಳಿನೊಳಗೆ ಹೂತುಹೋಗಿದ್ದ ಒಂದು ಸ್ತ್ರೀ ದೇವತೆಯ ಮುಂಡವನ್ನು ಹೊರಗೆ ತೆಗೆದಿದ್ದನು. ಅದರ ವಿಚಿತ್ರವಾದ ಸೌಂದರ್ಯವನ್ನು ನೀನು ನೋಡಿದ್ದಿದ್ದರೆ, ಯುದ್ಧವನ್ನು ಮರೆತುಬಿಡುತ್ತಿದ್ದೆ. ಇನ್ನೂ ಮುಂದೆ ಅಗೆದೆವು ; ಅವನಿಗೊಂದು ತೋಳು ಸಿಕ್ಕಿತು, ನನಗೆ ಎರಡು ಕೈ ಸಿಕ್ಕಿತು . . . ಈ ಕೈಗಳು ಎಷ್ಟು ಸ್ವಚ್ಛವಾಗಿ ಎಷ್ಟು ಕೋಮಲವಾಗಿ ಇದ್ದುವೆಂದರೆ—ನಕ್ಕು ನಲಿದಾಡುವುದಕ್ಕಾಗಿಯೇ ನಿರ್ಮಿತವಾದಂತೆ ಇದ್ದುವು: ಅರುಣ ಕಿರಣಗಳನ್ನು ಸವರಿ ಮುದ್ದಾಡುವುದಕ್ಕೂ ಹಿಮವನ್ನು ಚಿಮುಕಿಸುವುದಕ್ಕೂ ಅವು ಅರ್ಹವಾದವು . . . ಒಂದು ಕೈ, ಆ ನಾರಿಯ ವಕ್ಷದ ಮೇಲೆ ನೆಲಸಿತ್ತೋ ಎಂಬಂತೆ, ಕೋಮಲವಾಗಿ ಬಾಗಿತ್ತು ; ಇನ್ನೊಂದು ಕನ್ನಡಿಯೊಂದರ ಹಿಡಿಯನ್ನು ಇನ್ನೂ ಹಾಗೇ ಹಿಡಿದುಕೊಂಡಿತ್ತು . . .

**ಗ್ವೀಡೊ :** ಅಪ್ಪ, ಅಪ್ಪಾ ! ಇಲ್ಲಿ, ಜನರು ಹಸಿವಿನಿಂದ ಸಾಯುತ್ತಿದ್ದಾರೆ, ಕೋಮಲವಾದ ಕೈಗಳಿಗಾಗಲಿ ಕಂಚಿನ ಮುಂಡಗಳಿಗಾಗಲಿ ಈಗ ವೇಳೆಯಲ್ಲ ಎಂಬುದನ್ನು ನಾವು ಮರೆಯದಿರೋಣ !

**ಮಾರ್ಕೊ :** ಈ ಇದು ಅಮೃತಶಿಲೆಯದು . . .

**ಗ್ವೀಡೊ :** ಹಾಗೇ ಆಗಲಿ. ಅದಕ್ಕಿಂತ, ಈ ಮೂವತ್ತು ಸಾವಿರ ಜೀವಗಳನ್ನು ಕುರಿತು ಮಾತನಾಡೋಣ. ಒಂದು ಕ್ಷಣ ತಡವಾದರೆ, ಒಂದೇ ಅವಿವೇಕದ ಕೃತ್ಯ ನಡೆದರೆ, ಅವರಿಗೆ ಸರ್ವನಾಶ; ಅದರ ಬದಲು, ಒಂದು ಮಾತು, ಶುಭ ಸಮಾಚಾರದ ಒಂದು ಪಿಸುಮಾತು, ಅವರನ್ನು ಬದುಕಿಸಬಲ್ಲುದು . . . ನೀನು ಅಲ್ಲಿಗೆ ಹೋದದ್ದು ಒಂದು ಮುಂಡಕ್ಕಾಗಿ ಅಲ್ಲ, ಒಂದು ಮುರುಕು ಕೈಗಾಗಿ ಅಲ್ಲ ! ಅವರು ನಿನಗೆ ಏನು ಹೇಳಿದರು ? ಫ್ಲಾರೆನ್ಸ್ ಆಗಲಿ, ಪ್ರಿನ್‌ಸಿವಲ್ಲೆಯಾಗಲಿ ಏನು ಮಾಡಬೇಕೆಂದಿದ್ದಾರೆ ? ಬೇಗ ಹೇಳು ! ನಮ್ಮೊಡನೆ ಈ ಚಕ್ಕಂದ ಅವರಿಗೆ ಏಕೆ ? ನಮ್ಮ ಕಿಟಕಿಯ ಕೆಳಗೆ, ಆ ಕೂಗು ಕೇಳಿಸುವುದೆ ? ಆ ಹತಭಾಗ್ಯರು ಕಲ್ಲಿನ ನಡುವೆ ಬೆಳೆದ ಹುಲ್ಲಿಗಾಗಿ ಹೊಡೆದಾಡುತ್ತಿದ್ದಾರೆ . . .

**ಮಾರ್ಕೊ:** ನೀನು ಹೇಳುವುದು ಸರಿ. ವಸಂತವು ಬಂದಿದೆ, ಸಂತೋಷದ ಆಕಾಶವು ಭೂಮಿಯ ಮೇಲೆ ನಗುವನ್ನು ಚೆಲ್ಲುತ್ತಿದೆ, ದೇವತಾ ಸ್ತ್ರೀಯೊಬ್ಬಳು ಸ್ವರ್ಗದ ದೇವತೆಗಳಿಗೆ ಥಳಥಳಿಸುವ ಪಾತ್ರೆಯನ್ನು ನೀಡು ವಳೋ ಎಂಬಂತೆ ನೀಲದ ಕಡೆಗೆ ಸಮುದ್ರ ಚಾಚಿದೆ, ಈ ಮಧ್ಯೆ ಜನ ಯುದ್ಧ ದಲ್ಲಿ ತೊಡಗಿರುವರೆಂಬುದನ್ನು ಮರೆಯುತ್ತಿದ್ದೆ. ಭೂಮಿ ಎಷ್ಟು ರಮಣೀಯ ವಾಗಿದೆ, ಜನರ ಮೇಲೆ ಅದಕ್ಕೆಷ್ಟು ಪ್ರೇಮ! . . . ನಿಮ್ಮ ಸುಖಗಳು ನಿಮಗೆ; ನನ್ನದನ್ನೇ ನಾನು ಸುಮ್ಮನೆ ಹೇಳುತ್ತಿದ್ದೇನೆ . . . ಅಲ್ಲದೆ, ನೀನು ಹೇಳು ವುದು ಸರಿ. ನಾನು ತಂದಿರುವ ಸುದ್ದಿಯನ್ನು ಕೂಡಲೆ ಹೇಳಬೇಕಾಗಿತ್ತು . . . ನಾನು ತಂದಿರುವ ಸಂದೇಶದಲ್ಲಿ ಮೂವತ್ತು ಸಾವಿರ ಜೀವಕ್ಕೆ ವಿಮೋಚನೆಯೂ ಒಂದು ಜೀವಕ್ಕೆ ದಾರುಣವಾದ ಯಾತನೆಯೂ ತುಂಬಿದೆ . . . ಆದರೆ, ಈಯೊಂದು ಜೀವ, ಕೀರ್ತಿಯನ್ನು ಗಳಿಸಲು ಇದು ಪರ್ವಕಾಲವೆಂದುಕೊಳ್ಳ ಬಹುದು; ಯುದ್ಧಗಳಿಂದ ಬರುವ ಕೀರ್ತಿಗಳಿಗಿಂತ ಇದು ಅತ್ಯಂತ ದೊಡ್ಡ ದೆಂದು ನನಗೆನಿಸುತ್ತಿದೆ . . . ಒಂದು ವ್ಯಕ್ತಿಯಲ್ಲಿ ತೋರುವ ಪ್ರೀತಿ ಒಳ್ಳೆ ಯದೇ, ಅದರಿಂದ ಆಗುವ ಸುಖ ಬೇರೆ; ಆದರೆ ಅನೇಕರನ್ನು ಒಳಕೊಳ್ಳ ತಕ್ಕಂಥ ಪ್ರೀತಿ ಇನ್ನೂ ದೊಡ್ಡದು, ಇನ್ನೂ ಪ್ರಶಸ್ತವಾದದ್ದು . . . ಎಲ್ಲ ಜನರೂ ಮೆಚ್ಚಿಕೊಳ್ಳುವ ಶೀಲಗುಣಗಳು ಒಳ್ಳೆಯವೇ; ಆದರೂ ನಮ್ಮ ದೃಷ್ಟಿ ಅವರಿಂದ ಮುಂದೆ ಮೀರುವ ದಿನಗಳು ಬರುತ್ತವೆ, ಆಗ ಅವುಗಳ ಮಹತ್ವ ಕಡಮೆಯಾದಂತೆ ಕಾಣುತ್ತದೆ . . . ಕೇಳು! . . . ನಾನು ಹೇಳುವುದನ್ನು ಕೇಳಲು ಸಿದ್ಧನಾಗು. ನಾನು ಆಡುವ ಮೊದಲ ಮಾತುಗಳನ್ನು ಕೇಳಿ, ಆಣೆ ಪ್ರಮಾಣ ಇಡಬೇಡ. ಅದರಿಂದ ನಾವು ಹಜ್ಜೆ ಹಿಂದಿಡುವುದು ದುಸ್ತರ ವಾದೀತು. ಅದರಿಂದ, ಹಿಮ್ಮೆಟ್ಟಬೇಕೆಂದರೂ ಆಗದಂತೆ ನಮ್ಮ ವಿವೇಚನಾ ಶಕ್ತಿ ಸೆರೆಸಿಕ್ಕೀತು . . .

**ಗ್ವೀಡೊ:** (ತನ್ನ ಕೈಕೆಳಗಿನ ಅಧಿಕಾರಿಗಳಿಗೆ ಹೊರಡುವಂತೆ ಸನ್ನೆ ಮಾಡಿ,) ನೀವು ಹೊರಡಿ.

**ಮಾರ್ಕೊ:** ಬೇಡ. ಇಲ್ಲೆ ಇರಿ . . . ಈಗ ನಾವು ಇತ್ಯರ್ಥಮಾಡ ಬೇಕಾಗಿರುವುದು ನಮ್ಮ ಗತಿಯನ್ನು, ನಮ್ಮೆಲ್ಲರ ಗತಿಗಳನ್ನು. ನಾವು ರಕ್ಷಿಸುವ ಹತಭಾಗ್ಯರೆಲ್ಲರೂ ಈ ಕೊಠಡಿಯಲ್ಲಿ ನೆರೆದಿದ್ದರೆ ವಾಸಿಯಾಗಿತ್ತು,

ಎನ್ನಿಸುತ್ತದೆ! ಯಾವ ನಿರ್ಗತಿಕ ನಿರ್ಭಾಗ್ಯರನ್ನು ಉಳಿಸುವುದಕ್ಕಾಗಿ ನಾವು ತೊಡಗಿರುವೆವೋ ಅವರು ಇಲ್ಲಿ ಕಿಟಕಿಯ ಬಳಿ ಇದ್ದು, ನಾನು ತಂದಿರುವ ಸಂದೇಶವನ್ನು ಕೇಳಬೇಕು, ನೆನಪಿನಲ್ಲಿರಿಸಿಕೊಳ್ಳಬೇಕು; ನಾನು ಮುಕ್ತಿಯನ್ನು ತಂದಿದ್ದೇನೆ, ಆದರೆ ವಿವೇಕ ಅದನ್ನು ಒಪ್ಪಿಕೊಳ್ಳಬೇಕು ಮಾತ್ರ! ಒಂದು ಮಹದಪರಾಧವಾದರೆ, ಹತ್ತುಸಾವಿರ ಕಾರಣಗಳಾದರೂ ಅದನ್ನು ತಿದ್ದಲಾರವು. ಆದ್ದರಿಂದಲೇ ಅದರ ಗುರುತ್ವದಿಂದ ನನಗೆ ಭೀತಿಯಾಗಿದೆ. ನಾನು ಕೂಡ . . .

**ಗ್ನೀಡೊ :** ಒಗಟಿಗಳು ಸಾಕು, ಅಪ್ಪ, ನಿನ್ನ ದಮ್ಮಯ್ಯ! ಇಷ್ಟು ಮಾತುಗಳನ್ನು ಆಡಬೇಕಾದಂತಹ ವಿಷಯವಾದರೂ ಏನು? ಎಲ್ಲವನ್ನೂ ಹೇಳಿಬಿಡು! ಈಗ ನಾವು ಯಾವುದಕ್ಕೂ ಅಂಜುವವರಲ್ಲ!

**ಮಾರ್ಕೊ :** ಹಾಗೇ ಆಗಲಿ! ಕೇಳು! ಪ್ರಿನ್ಸಿವಲ್ಲೆಯನ್ನು ನೋಡಿದೆ; ಅವನೊಡನೆ ಮಾತನಾಡಿದ್ದೇನೆ . . . ಯಾರನ್ನು ಕಂಡರೆ ತಮಗೆ ಭೀತಿಯೋ ಅವರನ್ನು ಕುರಿತು ಜನ ಕಟ್ಟುವ ಚಿತ್ರ ಎಷ್ಟು ಸುಳ್ಳು, ಎಂಬುದು ವಿಚಿತ್ರ . . . ಅಚಿಲೀಸಿನ ಗುಡಾರಕ್ಕೆ ಪ್ರಯಾಮನು ಹೋದಂತೆ ನಾನು ಅವನಲ್ಲಿಗೆ ಹೋದೆ. ಕುಡುಕನನ್ನು, ರಕ್ತದ ಕಲೆ ಅಂಟಿದ ಕ್ರೂರಿಯನ್ನು, ಯುದ್ಧಮಾಡುವುದರಲ್ಲಿ ಏನೋ ಕೌಶಲವಿರುವುದೊಂದೇ ಗುಣವಾದ ಹುಚ್ಚನನ್ನು ಕಾಣುವೆನೆಂದುಕೊಂಡಿದ್ದೆ . . . ಅವನು ಹಾಗೆಂದು ಯಾವಾಗಲೂ ಇತರರು ಹೇಳುತ್ತಿದ್ದರು . . . ರಣವೇ ಮೂರ್ತೀಭವಿಸಿದ ರಾಕ್ಷಸ, ಅತಿ ದುಡುಕು, ಅಸಂಬದ್ಧಪ್ರಲಾಪಿ, ತುಂಬ ಜಂಬ, ಪೋಕರಿ, ದ್ರೋಹಿ, ಕ್ರೂರಿ—ಇಂಥವನನ್ನು ಕಾಣುವೆನೆಂದು ನಿರೀಕ್ಷಿಸಿದ್ದೆ . . .

**ಗ್ನೀಡೊ :** ಪ್ರಿನ್ಸ್‌ಸಿವಲ್ಲೆ ದ್ರೋಹಿಯಲ್ಲವೆಂಬುದು ಒಂದು ಹೊರತು, ಈಗ ನೀನು ಹೇಳಿದ್ದೆಲ್ಲ ಅವನಿಗೆ ಹೊಂದುತ್ತದೆ.

**ಬೋರ್ಸೊ :** ಅಲ್ಲ, ಅವನು ಸರ್ವಥಾ ದ್ರೋಹಿಯಲ್ಲ. ಫ್ಲಾರೆನ್ಸಿನ ಸೇವೆಮಾಡಿದರೂ, ಅವನ ಸ್ವಾಮಿಭಕ್ತಿ ಕಳಂಕವಿಲ್ಲದ್ದು . . .

**ಮಾರ್ಕೊ :** ನಾನು ಕಂಡ ಮನುಷ್ಯನು ನನಗೆ ಬಗ್ಗಿ ನಮಿಸಿದ; ತಾನು ನನ್ನ ಶಿಷ್ಯನೆಂಬಂತೆ, ನಾನು ಅವನಿಗೆ ಗೌರವದ ಗುರು ಎಂಬಂತೆ. ಅವನು ಪಂಡಿತ, ಅಧ್ಯಯನಶಾಲಿ, ಬುದ್ಧಿವಂತ, ಜ್ಞಾನಾರ್ಜನೆಯಲ್ಲಿ

ಆಸಕ್ತ, ಸಾವಧಾನದಿಂದ ಕಿವಿಕೊಟ್ಟು ಕೇಳುತ್ತಾನೆ, ಸುಂದರವಾದ ವಸ್ತು ಗಳೆಲ್ಲವನ್ನೂ ಕಣ್ಣು ತೆರೆದು ಗಮನಿಸುತ್ತಾನೆ. ಅವನು ಕರುಣಾಳು, ಉದಾರಿ, ಯುದ್ಧವೆಂದರೆ ಅವನಿಗೆ ಇಷ್ಟವಿಲ್ಲ; ಅವನು ನಿಃಸ್ಪೃಹ, ನಿಷ್ಕಪಟಿ, ವಿಶ್ವಾಸ ಘಾತಕವಾದ ಆ ಜನರಾಜ್ಯಕ್ಕೆ ಮನಸ್ಸಿಲ್ಲದೆ ಸೇವಕನಾಗಿದ್ದಾನೆ. ಜೀವನದ ಕೋಟಲೆಗಳಿಂದಾಗಿ—ಅವನ ಅದೃಷ್ಟವಿರಬಹುದು—ಅವನು ಸೈನಿಕನಾದನು. ಅವನು ಅಸಹ್ಯಪಡುವ ಯಶಸ್ಸಿಗೆ ಅದೇ ಅದೃಷ್ಟ ಅವನನ್ನು ಕಟ್ಟಿಹಾಕಿತು. ಅದನ್ನು ತೊರೆದುಬಿಡಲು ಅವನಿಗೆ ಸಂತೋಷವೇ ಆದರೂ ಅದಕ್ಕೆ ಮೊದಲು ಅವನು ಈಡೇರಿಸಿಕೊಳ್ಳಬಯಸುವ ಆಸೆಯೊಂದಿದೆ. ಅದೊಂದು ಭಯಂಕರ ವಾದ ಆಸೆ; ಯಾವುದೋ ಮಹತ್ವಾದ, ಅಸಮಾನವಾದ, ಅಲಭ್ಯವಾದ ಪ್ರೇಮಕ್ಕೆ ಸಂಬಂಧಿಸಿದಂಥ ಕ್ರೂರನಕ್ಷತ್ರದಲ್ಲಿ ಹುಟ್ಟಿದವನ ಪಾಲಿಗೆ ಇಂಥ ಬಯಕೆ ಬರುವುದುಂಟು.

**ಗ್ವೀಡೊ :** ಅಪ್ಪ, ಅಪ್ಪ, ಹಸಿವಿನಿಂದ ಸಾಯುತ್ತಿರುವ ಜನರಿಗೆ ಈ ಕಾಲವಿಳಂಬವು ಸಹನೆಯಾಗದು ಎಂಬುದನ್ನು ನೀನು ಮರೆತಿದ್ದೀಯೆ? ಈ ಮನುಷ್ಯನ ಗುಣ ಕಟ್ಟಿಕೊಂಡು ನಮಗೇನು ? ವಿಮೋಚನೆಯೆಂದು ಹೇಳು ತ್ತೀಯೆ; ಹೇಳುವೆನೆಂದುದನ್ನು ಹೇಳು!

**ಮಾರ್ಕೊ :** ನಿಜವೇ. ಹೇಳಲು ಹಿಂಜರಿಯುವುದು ನನ್ನ ತಪ್ಪು; ಈ ಜಗತ್ತಿನಲ್ಲೇ ನನಗೆ ಅತ್ಯಂತ ಪ್ರಿಯತಮರಾದ ಇಬ್ಬರು ಪ್ರಾಣಿಗಳ ವಿಷಯ ದಲ್ಲಿ ಇದು ಕ್ರೂರವಾದುದಾದರೂ . . .

**ಗ್ವೀಡೊ :** ಏನಾದರೂ ಆಗಿರಲಿ ಅದು, ನನ್ನ ಪಾಲಿನದನ್ನು ನಾನು ಒಪ್ಪಿಕೊಳ್ಳುತ್ತೇನೆ ; ಮತ್ತೊಬ್ಬರು ಯಾರು ?

**ಮಾರ್ಕೊ :** ಕೇಳು, ಹೇಳುತ್ತೇನೆ . . . ಈ ಕೊಠಡಿಯನ್ನು ಪ್ರವೇ ಶಿಸಿದಾಗ ಒಂದು ತರಹ ಕಷ್ಟವಾದಂತೆ, ಏನೋ ವಿಚಿತ್ರವಾಗಿ ಇತ್ತು; ಆದರೂ, ವಿಮೋಚನೆಗೆ ಒಂದು ಅವಕಾಶವಾಯಿತಲ್ಲಾ ಎಂಬ ಪರವಶತೆಯಿಂದ . . .

**ಗ್ವೀಡೊ :** ಹೇಳು ಮತ್ತೆ !

**ಮಾರ್ಕೊ :** ಫ್ಲಾರೆನ್ಸ್ ನಮ್ಮನ್ನು ನಿರ್ಮೂಲಮಾಡಲು ನಿಶ್ಚಯಿಸಿದೆ. ಸೈನ್ಯದ ಸಲಹಾಮಂಡಲಿಯವರು ಇದು ಅಗತ್ಯವೆಂದು ತೀರ್ಮಾನಿಸಿದ್ದಾರೆ, ಸಚಿವಮಂಡಲಿಯವರು ಅವರ ತೀರ್ಪನ್ನು ಒಪ್ಪಿದ್ದಾರೆ; ಆ ನಿರ್ಧಾರವನ್ನು

ಕದಲಿಸುವಂತೆಯೇ ಇಲ್ಲ. ಆದರೆ ಫ್ಲಾರೆನ್ಸಿಗೆ ತುಂಬ ಮುಂದಾಲೋಚನೆ, ಕುಟಿಲೋಪಾಯದಲ್ಲಿ ಅದಕ್ಕೆ ತುಂಬ ಬುದ್ಧಿ. ಲೋಕಕ್ಕೆ ನಾಗರಿಕತೆಯನ್ನು ಕಲಿಸುತ್ತಿರುವ ಫ್ಲಾರೆನ್ಸ್, ಯುಕ್ತಾಯುಕ್ತ ಪರಿಜ್ಞಾನವಿಲ್ಲದೆ ರಕ್ತಪಾತ ಮಾಡಿತು ಎಂಬ ಆರೋಪವು ತನ್ನ ಮೇಲೆ ಬರಲು ಅವಕಾಶ ಕೊಡುವುದಿಲ್ಲ. ಆದ್ದರಿಂದ, ತಾನು ಕರುಣೆಯಿಂದ ನೀಡಿದ ಶರಣಾಗತಿಯ ನಿಬಂಧನೆಗಳನ್ನು ನಾವು ನಿರಾಕರಿಸಿದೆವೆಂದು ಘೋಷಿಸುತ್ತದೆ. ನಗರದ ಮೇಲೆ ಧಾಳಿ ನಡಸಿ, ವಶಪಡಿಸಿಕೊಳ್ಳುತ್ತಾರೆ; ಸ್ಪೆಯಿನ್ ಮತ್ತು ಜರ್ಮನಿಯಿಂದ ಜೀತಕ್ಕಾಗಿ ಬಂದಿರುವ ಸೈನಿಕರನ್ನು ನುಗ್ಗಿಸುತ್ತಾರೆ. ಕೊಳ್ಳೆಹೊಡೆಯುವುದಕ್ಕಾಗಲಿ ಬೆಂಕಿಯಿಡುವುದಕ್ಕಾಗಲಿ, ಸುಲಿಗೆಗಾಗಲಿ ಕೊಲೆಗಾಗಲಿ ಅವಕಾಶವಿರುವಾಗ ಅವರನ್ನು ಒತ್ತಾಯಪಡಿಸಬೇಕಾದ್ದಿಲ್ಲ. ಬಾಯಿಗೆ ಹಾಕಿರುವ ಕಟ್ಟನ್ನು ಸಡಿಲ ಮಾಡಿದರೆ ಸಾಕು: ನಾಯಕರು, ಆ ದಿವಸ, ಅಸಹಾಯರಾದಂತೆಯೂ ತಮ್ಮ ಹತೋಟಿ ಮೀರಿಹೋದಂತೆಯೂ ತೋರಿಸಿಕೊಳ್ಳಲು ಮರೆಯುವುದಿಲ್ಲ . . . ನಮಗಾಗಿ ಕಾದಿರುವ ಗತಿಯಾದರೂ ಇಂಥದೇ; ಈ ಅನರ್ಥಕ್ಕೆ ವ್ಯಥೆಯನ್ನು ವ್ಯಕ್ತಪಡಿಸುವುದರಲ್ಲಿ ಫ್ಲಾರೆನ್ಸೇ ಮೊದಲಾಗುವುದು. ಜೀತದ ಆಸೆಗಾಗಿ ಬಂದ ಪರದೇಶದ ಸೈನಿಕರ ಅನಿರೀಕ್ಷಿತವಾದ ಸ್ವೇಚ್ಛಾವೃತ್ತಿಯಿಂದ ಇದೆಲ್ಲ ಆಯಿತೆನ್ನುವರು, ಅವರ ವರ್ತನೆಯಿಂದ ಆಗ್ರಹಗೊಂಡಂತೆ ನಟಿಸಿ, ಅವರನ್ನು ಕೆಲಸದಿಂದ ತೆಗೆಯುವರು. ನಮ್ಮ ನಾಶವನ್ನು ಸಾಧಿಸಿದ ಮೇಲೆ, ಆ ಜೀತದ ಸೈನಿಕರಿಂದ ಆಗಬೇಕಾದ್ದಾದರೂ ಏನು? . . .

**ಗ್ವೀಡೊ:** ಹೌದು. ಅದು ಫ್ಲಾರೆನ್ಸಿನ ಮಾರ್ಗ . . .

**ಮಾರ್ಕೊ:** ಪ್ರಜಾಧಿಪತ್ಯದ ನಿಯೋಗಮಂಡಲಿಯವರು ಹೀಗೆಂದು ಪ್ರಿನ್ಸಿವಲ್ಲಿಗೆ ಗುಪ್ತವಾಗಿ ಹೇಳಿಕಳಿಸಿದ್ದಾರೆ. ಈ ಕಳೆದ ವಾರದಲ್ಲಿ, ದಿನದಿನವೂ, ಕಡೆಯಧಾಳಿ ನಡಸೆಂದು ಅವನನ್ನು ಒತ್ತಾಯಪಡಿಸಿದ್ದಾರೆ. ಇದುವರೆಗೂ, ಅವನೂ ಏನೇನೋ ಸಬೂಬು ಹೇಳಿ ತಡೆದಿದ್ದಾನೆ. ಇಷ್ಟೇ ಅಲ್ಲ; ನಿಯೋಗದವರು ತನ್ನ ಚಲನೆಗಳನ್ನು ಮರೆಯಿಂದ ಪರಿಶೀಲಿಸಿ, ತನ್ನ ಮೇಲೆ ದ್ರೋಹದ ಆರೋಪವನ್ನು ಹೊರಿಸುತ್ತಿರುವರೆಂಬ ಕಾಗದಪತ್ರಗಳನ್ನು ತಡೆದು ವಶಪಡಿಸಿಕೊಂಡಿದ್ದಾನೆ. ಪೀಸಾ ನಾಶವಾಗಿ, ಯುದ್ಧಮುಗಿಯಿತು ಎಂದರೆ, ಅವನಿಗೆ ಫ್ಲಾರೆನ್ಸಿನಲ್ಲಿ ಕಾದಿರುವುದು—ಅವನ ಕಾರ್ಯದ ಖಂಡನೆ, ಚಿತ್ರಹಿಂಸೆ,

ಕೊನೆಗೆ ಸಾವು; ಅಪಾಯಕರರಾದ ಎಷ್ಟೋ ಸೇನಾಧಿಪತಿಗಳಿಗೆ ಪೂರ್ವದಲ್ಲಿ ಆದ ಹಾಗೆ. ಎಂದರೆ, ತನ್ನ ಗತಿ ಏನೆಂಬುದು ಅವನಿಗೆ ಗೊತ್ತು . . .

**ಗ್ವೀಡೊ :** ಸರಿ, ಒಳ್ಳೆಯದು; ಅವನು ಹೇಳುವುದೇನು ?

**ಮಾರ್ಕೊ :** ಸಮಯಬಂದಂತೆ ನುಣಿಚಿಕೊಳ್ಳುವ ಈ ಅನಾಗರಿಕರನ್ನು ನಂಬಬಹುದಾದ ಮಟ್ಟಿಗೆ—ತಾನೇ ಆರಿಸಿ ಸೇರಿಸಿಕೊಂಡ ಬಿಲ್ಗಾರರಲ್ಲಿ ಬಹುಭಾಗವನ್ನು ನೆಚ್ಚಿಕೊಂಡಿದ್ದಾನೆ. ಅದು ಏನೇ ಆದರೂ, ಅವನಿಗೆ ಭಕ್ತರಾಗಿರುವ ಒಂದು ನೂರು ಜನ ಅವನ ಅಂಗರಕ್ಷಕರಿದ್ದಾರೆ; ಅವರನ್ನು ಇವನು ಸಂಪೂರ್ಣವಾಗಿ ನಂಬಬಹುದು. ಅವನು ಹೇಳುವುದು ಏನೆಂದರೆ: ತನ್ನ ಹಿಂದೆ ಬರಲು ಇಷ್ಟಪಡುವವರನ್ನೆಲ್ಲ ಪೀಸಾಗೆ ಕರೆದುಕೊಂಡುಬರತಕ್ಕದ್ದು; ತಾನು ತೊರೆದು ಬರುವ ಸೈನ್ಯಕ್ಕೆ ವಿರುದ್ಧವಾಗಿ ಅವರು ಈ ನಗರವನ್ನು ರಕ್ಷಿಸಲು ಸಹಾಯ ಮಾಡತಕ್ಕದ್ದು . . .

**ಗ್ವೀಡೊ :** ನಮಗೆ ಬೇಕಾಗಿರುವುದು ಜನಬಲವಲ್ಲ; ಅಪಾಯಕರವಾದ ಈ ಸಹಾಯಕದಳದಲ್ಲಿ ನಮಗೆ ಆಸೆಯಾಗದು. ಗುಂಡು, ಆಹಾರ ಸಾಮಗ್ರಿ, ಮದ್ದು ಇವುಗಳನ್ನು ಅವನು ನಮಗೆ ಕೊಡಲಿ.

**ಮಾರ್ಕೊ :** ತಾನು ನೀಡಿದ ಸಹಾಯದಲ್ಲಿ ನಿಮಗೆ ಶಂಕೆ ತೋರಬಹುದೆಂದೂ, ಬಹುಶಃ ನೀವು ಅದನ್ನು ನಿರಾಕರಿಸಬಹುದೆಂದೂ ಅವನು ಮೊದಲೇ ಕಂಡಿದ್ದನು. ಆದ್ದರಿಂದ, ಮದ್ದುಗುಂಡುಗಳನ್ನೂ ಆಹಾರಸಾಮಗ್ರಿಗಳನ್ನೂ ತುಂಬಿಕೊಂಡು ಈಗ ತಾನೆ ತನ್ನ ಪಾಳೆಯವನ್ನು ಪ್ರವೇಶಿಸಿರುವ ಮುನ್ನೂರು ಗಾಡಿಗಳ ತಂಡವನ್ನು ನಗರದೊಳಕ್ಕೆ ಕಳುಹಿಸಿಕೊಡಲು ಒಪ್ಪುತ್ತಾನೆ.

**ಗ್ವೀಡೊ :** ಅದು ಹೇಗೆ ಮಾಡಿಯಾನು ?

**ಮಾರ್ಕೊ :** ನಾನು ಕಾಣೆ. ಯುದ್ಧದ ದಾರಿಗಳೂ ರಾಜಕೀಯದ ಮಾರ್ಗಗಳೂ ನನಗೆ ಪರಿಚಯವಿಲ್ಲ. ಆದರೆ, ಸಂಕಲ್ಪಿಸಿದ್ದನ್ನು ಅವನು ಮಾಡುತ್ತಾನೆ . . . ಫ್ಲಾರೆನ್ಸಿನ ನಿಯೋಗದವರು ಇದ್ದರೂ ಕೂಡ, ಪ್ರಜಾರಾಜ್ಯದ ಅಧಿಕಾರಿಗಳು ತನ್ನನ್ನು ಸೇನಾಧಿಪತ್ಯದಿಂದ ತೆಗೆಯದಿರುವವರೆಗೆ, ಅವನ ಪಾಳೆಯದಲ್ಲಿ ಅವನಿಗೆ ಸಂಪೂರ್ಣ ಯಜಮಾನಿಕೆ ಉಂಟು. ಈಗ, ವಿಜಯ ದೊರಕುವ ಹೊತ್ತಿನಲ್ಲಿ, ಅವನಲ್ಲಿ ಶ್ರದ್ಧೆಯಿರುವ ಸೈನ್ಯದ ನಡುವೆ,

ಇನ್ನೇನು ಕೊಳ್ಳಿ ಕೈವಶವಾಯಿತು ಎಂಬಾಗ, ಅವನನ್ನು ಅಧಿಕಾರದಿಂದ ತೆಗೆಯಲು ಅವರಿಗೆ ಧೈರ್ಯವಿಲ್ಲ. ಫ್ಲಾರೆನ್ಸ್ ತನ್ನ ಸಮಯವನ್ನು ಕಾಯಬೇಕು!

**ಗ್ವೀಡೊ :** ಒಳ್ಳೆಯದು—ಅರ್ಥವಾಯಿತು; ತಾನು ಬದುಕಿಕೊಳ್ಳು ವುದಕ್ಕಾಗಿ ನಮ್ಮನ್ನು ಬದುಕಿಸುತ್ತಿದ್ದಾನೆ. ಪ್ರತೀಕಾರವನ್ನು ಬಯಸುತ್ತಿ ದ್ದಾನೆ. ಆದರೆ, ಇದನ್ನೇ ಬೇರೆ ರೀತಿಗಳಿಂದ, ಇನ್ನೂ ಹೆಚ್ಚು ಚಮತ್ಕಾರ ವಾಗಿ ಸಾಧಿಸಬಹುದು, ಎನ್ನಿಸುತ್ತದೆ. ತನ್ನ ಶತ್ರುಗಳನ್ನು ಬದುಕಿಸುವುದ ರಲ್ಲಿ ಅವನ ಆಸಕ್ತಿಯೇನಿರಬಹುದು? ಎಲ್ಲಿಗೆ ಹೋದಾನು? ಅವನ ಗತಿ ಏನಾದೀತು? ಪ್ರತಿಫಲವಾಗಿ ಅವನು ಏನು ಕೇಳುತ್ತಾನೆ?

**ಮಾರ್ಕೊ :** ಪದಗಳು ಕ್ರೂರವಾಗುವ, ಸರ್ವಸಮರ್ಥವಾಗುವ ಕಾಲ ಒದಗಿದೆ, ಮಗುವೆ. ಈಗಿನ ಎರಡು ಮೂರು ಅಕ್ಷರಗಳಾದರೂ ತಟಕ್ಕನೆ ಅದೃಷ್ಟದ ಶಕ್ತಿಯನ್ನು ಸಾಲ ತೆಗೆದುಕೊಂಡು, ಬಲಿಯಾಗಬೇಕಾದ ವರನ್ನು ಭದ್ರವಾಗಿ ಹಿಡಿಯುವುದು . . . ನನ್ನ ಮಾತಿನ ಧ್ವನಿಯು, ಹೇಳ ಬೇಕಾದ್ದನ್ನು ನಾನು ಹೇಳಬಹುದಾದ ರೀತಿಯು, ಎಷ್ಟು ಸಾವುಗಳಿಗೆ ಕಾರಣ ವಾಗುವುದೋ, ಅಥವಾ ಎಷ್ಟು ಜೀವಗಳನ್ನು ಉಳಿಸುವುದೋ ಎಂದು ಯೋಚಿಸಿದಾಗ ನನಗೇ ನಡುಕವುಂಟಾಗುವುದು . . .

**ಗ್ವೀಡೊ :** ಹೇಳು, ತಡವೇಕೆ? . . . ನಮ್ಮ ಈ ಇಂಥ ದುರ್ದೆಶೆಯಲ್ಲಿ ಯಾವ ಕಠೋರವಾದ ಮಾತುಗಳಾದರೂ ಏನೂ ಹೆಚ್ಚಾಗದು . . .

**ಮಾರ್ಕೊ :** ಪ್ರಿನ್ಸ್‌ಸಿವಲ್ಲೆ ಬುದ್ಧಿವಂತನಂತೆ ಕಾಣುತ್ತಾನೆ, ಎಂದು ಹೇಳಿದ್ದೇನೆ; ಅವನು ವಿವೇಕದಿಂದ ವರ್ತಿಸುತ್ತಾನೆ, ಅವನು ದಯಾಳು, ಎಂದು ಹೇಳಿದ್ದೇನೆ . . . ಆದರೂ, ಒಮ್ಮೆಯಾದರೂ ಅವಿವೇಕ ಮಾಡದಂಥ ಬುದ್ಧಿವಂತನೆಲ್ಲುಂಟು? ಯಾವುದೋ ವಿಕಾರವಾದ ದುರ್ಭಾವನೆಗೆ ಒಮ್ಮೆ ಯಾದರೂ ಮನಸ್ಸಿನಲ್ಲಿ ಎಡೆಗೊಡದಂತಹ ಶೀಲವಂತನೆಲ್ಲುಂಟು? . . . ನಮ್ಮ ವಿವೇಚನೆ, ನಮ್ಮ ಕನಿಕರ, ನಮ್ಮ ನ್ಯಾಯತತ್ಪರತೆ—ಇವುಗಳಿಗೂ ನಮ್ಮ ಜೀವಕ್ಕೆ ಅತಿ ಸಮೀಪವಾಗಿರುವ ಕಾಮಕ್ಕೂ ವಿಷಯಾಸಕ್ತಿಗೂ ರಾಗೋನ್ಮಾದಕ್ಕೂ ಸದಾ ಹೋರಾಟವಾಗುತ್ತಿಲ್ಲವೆ? . . . ನಾನು, ನಾನೇ, ಒಮ್ಮೆಯಲ್ಲ, ಅನೇಕ ಸಲ ಸೋತಿದ್ದೇನೆ, ಮತ್ತೆಯೂ ಸೋಲುತ್ತೇನೆ;

ಅದರಂತೆಯೇ, ಬಹುಶಃ, ನೀನೂ ಸೋಲುವೆ . . . ಹೀಗೇ ನಮ್ಮೆಲ್ಲರಿಗೂ ಸಂಭವಿಸತಕ್ಕದ್ದೇ! ನಿನಗಾಗಿ ಒಂದು ದುಃಖ ಕಾದಿದೆ; ಅದನ್ನು ಸರಿಯಾಗಿ ಪರಿಶೀಲಿಸಿದರೆ, ಬಹುಶಃ, ಅದು ದುಃಖವೆಂದಾಗಬಾರದು . . . ಈ ದುಃಖಕ್ಕೂ ಅದಕ್ಕೆ ಕಾರಣವಾದ ಅನ್ಯಾಯಕ್ಕೂ ಅಜಗಜಾಂತರವಾದ ತಾರತಮ್ಯವಿರುವುದನ್ನು ಸ್ಪಷ್ಟವಾಗಿ ಕಾಣುವ ಈ ನಾನು, ಈ ಅವಿವೇಕದ ದುಃಖಕ್ಕಿಂತ ಹೆಚ್ಚು ಅವಿವೇಕವಾದ ಒಂದು ವಾಗ್ದಾನವನ್ನು ನನ್ನ ಮುಟ್ಟಿಗೆ ಕೊಟ್ಟು ಬಂದಿದ್ದೇನೆ . . . ಪ್ರಾಜ್ಞನಾಗಬೇಕೆಂದು ಇಚ್ಛಿಸುವ ನಾನು ಈ ಅವಿವೇಕದ ವಾಗ್ದಾನವನ್ನು ಅವಿವೇಕದಿಂದಲೇ ನಡೆಸುತ್ತೇನೆ; ವಿವೇಕದ ಹೆಸರಿನಲ್ಲಿ ಮಾತನಾಡಲು ಸಾಹಸಪಡುವ ಮಹಾಪ್ರಾಜ್ಞ ನಾನು! . . . ನೀಡಿ ಬಂದಿರುವ ಇದನ್ನು ನೀನು ನಿರಾಕರಿಸಿದೆಯೋ, ಶತ್ರುವಿನ ಪಾಳಯಕ್ಕೆ ಹಿಂದಿರುಗುವೆನೆಂದು ನಾನು ಒಪ್ಪಿಬಂದಿದ್ದೇನೆ . . . ಅಲ್ಲಿ ನನಗಾಗಿ ಕಾದಿರುವುದೇನು? ನನ್ನ ಬುದ್ಧಿಹೀನವಾದ ಸ್ವಾಮಿಭಕ್ತಿಗೆ ಬಹುಶಃ ಮರಣವೂ ಚಿತ್ರಹಿಂಸೆಯೂ ಫಲವಾಗಿ ದೊರಕೀತು . . . ಅದು ಏನೇ ಇದ್ದರೂ, ನಾನು ಹೋಗುವವನೇ . . . ಅವಿವೇಕವನ್ನು ಏನೇ ಕಿಂಕಾಪಿನಲ್ಲಿ ಅಲಂಕಾರ ಮಾಡಿದರೂ ಅದು ಅವಿವೇಕವಾಗಿಯೇ ಇರುತ್ತದೆಂಬುದನ್ನು ಬಲ್ಲೆನಾದರೂ ಮಾಡಲು ಮನಸ್ಸಿಲ್ಲದ ಈ ಅವಿವೇಕವನ್ನು ಮಾಡಿಯೇ ತೀರುತ್ತೇನೆ; ಏಕೆಂದರೆ, ವಿವೇಕವೊಂದಕ್ಕೇ ಕಿವಿಗೊಡಬಯಸುವವನಿಗೆ ಇರಬೇಕಾದ ಶಕ್ತಿ ನನಗೂ ಸಾಲದಾಗಿದೆ . . . ಆದರೂ ಇನ್ನೂ ನಿನಗೆ ಹೇಳಿಲ್ಲ. ಆಃ, ನೋಡು, ಸರಣಿ ಹೇಗೆ ತಪ್ಪುತ್ತದೆ, ಪದನ್ಯಾಸದ ಮೇಲೆ ಪದವಿನ್ಯಾಸವನ್ನು ಹೇಗೆ ನೇಯುತ್ತೇನೆ, ಪದದ ಮೇಲೆ ಪದವನ್ನು ಹೇಗೆ ಪೇರಿಸುತ್ತೇನೆ, ನಿರ್ಧಾರಿಸುವ ಗಳಿಗೆಯನ್ನು ಒಂದಿಷ್ಟು ಮಾತ್ರವಾದರೂ ತಡಮಾಡುವುದಕ್ಕೆ ಹೇಗೆ ಪ್ರಯತ್ನಿಸುತ್ತಿದ್ದೇನೆ! ಆದರೆ, ನನ್ನ ಶಂಕೆಸಂದೇಹಗಳಿಂದ ನಿನಗೆ ನಾನು ಅನ್ಯಾಯ ಮಾಡುತ್ತಿರಬಹುದು . . . ನೋಡು ಮತ್ತೆ! ನಾನು ಕಣ್ಣಾರೆ ಕಂಡಿರುವ ಈ ವಾಹನಗಳ ಮಹಾತಂಡ; ದವಸಧಾನ್ಯ, ಹಣ್ಣುಹಂಪಲು, ಇತರ ಪಾನೀಯಗಳು ತುಂಬಿದ ಈ ಗಾಡಿಗಳು; ಪ್ರಜೆಗಳಿಗೆ ಒಂದು ವಾರದ ಆಹಾರಕ್ಕೆ ಆಗಿಯೂ ಇನ್ನೂ ಮಿಗುವ ಈ ಕುರಿಗಳ ಹಿಂಡು, ಈ ದನಗಳ ಮಂದೆ; ಫ್ಲಾರೆನ್ಸನ್ನು ಸೋಲಿಸಿ, ಪೀಸಾವಿಗೆ ಸಮೃದ್ಧಿಯನ್ನು ತರುವು

ದಕ್ಕಾಗುವ ಈ ಮದ್ದಿನ ಪೀಪಾಯಿಗಳು, ಸೀಸದ ಗಟ್ಟಿಗಳು ; ಇವೆಲ್ಲವನ್ನೂ ಇದೇ ರಾತ್ರಿ ನಮ್ಮ ನಗರದೊಳಕ್ಕೆ ಪ್ರವೇಶಗೊಳಿಸಲಾಗುವುದು . . . ಅದಕ್ಕೆ ಬದಲಾಗಿ ನೀನು ಪ್ರಿನ್ಸಿವಲ್ಲೆಯ ಬಳಿಗೆ ಕಳುಹಿಸಿ ಒಪ್ಪಿಸಿದರೆ—ಅವಳಾದರೂ ಬೆಳಗಿನ ಜಾವಕ್ಕೇ ಹಿಂದಿರುಗಿ ಬಂದುಬಿಡುವಳು. ಅವನು ಕೇಳುವುದು ಇಷ್ಟೆ : ತನ್ನ ವಿಜಯಕ್ಕೂ ನಮ್ಮ ಶರಣಾಗತಿಗೂ ಗುರುತಾಗಿ ಆಕೆ ಏಕಾಕಿಯಾಗಿ ಬರತಕ್ಕದ್ದು, ಏಕವಸ್ತ್ರಳಾಗಿ ಬರತಕ್ಕದ್ದು . . .

**ಗ್ವೀಡೊ :** ಯಾರು ? ಯಾರು ಹೋಗಬೇಕು ? ನೀನಿನ್ನೂ ನನಗೆ ಹೇಳಿಲ್ಲ . . .

**ಮಾರ್ಕೊ :** ಗಯೋವನ್ನ.

**ಗ್ವೀಡೊ :** ಏನು! ನನ್ನ ಹೆಂಡತಿ ? . . . ವನ್ನ ? . . .

**ಮಾರ್ಕೊ :** ಹೌದು, ನಿನ್ನ ವನ್ನ . . . ಕೊನೆಗೂ ಹೇಳಿಯಾಯಿತು!

**ಗ್ವೀಡೊ :** ಆದರೆ, ವನ್ನ ಏಕೆ ? ಸಾವಿರ ಹೆಂಗುಸರಿಲ್ಲವೆ ?

**ಮಾರ್ಕೊ :** ಏಕೆಂದರೆ, ಅವಳು ಪರಮಸುಂದರಿ, ಅವನಿಗೆ ಅವಳಲ್ಲಿ ಪ್ರೀತಿ . . .

**ಗ್ವೀಡೊ :** ಅವನಿಗೆ ಅವಳಲ್ಲಿ ಪ್ರೀತಿ ! . . . ಅವಳನ್ನು ಅವನು ಎಲ್ಲಿ ನೋಡಿದ್ದಾನೆ ? ಅವಳ ಗುರುತು ಅವನಿಗಿಲ್ಲ !

**ಮಾರ್ಕೊ :** ಅವನು ಅವಳನ್ನು ನೋಡಿದ್ದಾನೆ. ಅವಳನ್ನು ಅವನು ಬಲ್ಲನಾದರೂ—ಎಲ್ಲಿ, ಹೇಗೆ ಎಂಬುದನ್ನು ಹೇಳಬೊಲ್ಲ.

**ಗ್ವೀಡೊ :** ಆದರೆ ಅವಳು, ಅವಳು ಅವನನ್ನು ಕಂಡಿದ್ದಾಳೊ ? ಅವರು ಪರಸ್ಪರ ಕಂಡದ್ದು ಎಲ್ಲಿ ?

**ಮಾರ್ಕೊ :** ಅವಳು ಅವನನ್ನು ಎಂದೂ ಕಂಡಿಲ್ಲ; ಕೊನೆಗೆ, ಕಂಡಂತೆ ಜ್ಞಾಪಕವೂ ಇಲ್ಲ.

**ಗ್ವೀಡೊ :** ನಿನಗೆ ಇದು ಹೇಗೆ ಗೊತ್ತು ?

**ಮಾರ್ಕೊ :** ಅವಳೇ ನನಗೆ ಹೇಳಿದಳು . . .

**ಗ್ವೀಡೊ :** ಏನು !

**ಮಾರ್ಕೊ :** ಇಲ್ಲಿ ನಿನ್ನ ಬಳಿಗೆ ನಾನು ಬರುವ ಮುಂಚೆ . . .

**ಗ್ವೀಡೊ :** ನೀನು ಅವಳಿಗೆ ಹೇಳಿದೆಯ ?

**ಮಾರ್ಕೊ :** ಎಲ್ಲವನ್ನೂ . . .

**ಗ್ವೀಡೊ :** ಏನೆಂದೆ ! ಈ ಹೇಯವಾದ ವ್ಯಾಪಾರದ ಹೆಸರೆತ್ತಲು ನಿನಗೆ ಧೈರ್ಯ ಬಂದಿರಲಾರದು ?

**ಮಾರ್ಕೊ :** ಹೇಳಿದ್ದು ಹೌದು . . .

**ಗ್ವೀಡೊ :** ಅವಳು ಹೇಳಿದ್ದು ? . . .

**ಮಾರ್ಕೊ :** ಏನೂ ಇಲ್ಲ . . . ಅವಳ ಮುಖ ಬಿಳುಪೇರಿತು : ಸುಮ್ಮನೆ ಹೊರಟುಹೋದಳು . . .

**ಗ್ವೀಡೊ :** ಆಃ, ಒಳ್ಳೆಯದು ಮಾಡಿದಳು ! . . . ನಿನ್ನನ್ನು ನಿಂದಿಸಿ, ಆಕ್ಷೇಪಿಸುವುದಕ್ಕಿಂತ, ನಿನ್ನ ಕಾಲಿಗೆ ಬೀಳುವುದಕ್ಕಿಂತ, ಬಹುಶಃ ಅದೇ ವಾಸಿ . . . ಹೌದು, ಅದೇ ವಾಸಿ . . . ಮುಖ ಬಿಳುಪೇರಿತು, ಸುಮ್ಮನೆ ಹೊರಟು ಹೋದಳು . . . ದೇವಕನ್ಯೆಯಾದರೂ ಹೀಗೇ ಮಾಡುತ್ತಿದ್ದಳು ; ಅದು ವನ್ನ ಮಾಡುವ ರೀತಿ . . . ಇನ್ನೇನು ಹೇಳಬೇಕಾಗಿತ್ತು ? ಏನೂ ಇಲ್ಲ ! ನಾವು ಕೂಡ, ಏನೂ ಹೇಳುವುದು ಬೇಡ . . . ಬನ್ನಿ, ನನ್ನ ಮಿತ್ರರೆ, ಬತೇರಿಗೆ ಹಿಂದಿರುಗೋಣ. ಹೇಗಿದ್ದರೂ ಸಾಯಬೇಕು, ಕಡೆಯಪಕ್ಷ ಅವಮಾನದ ಕಳಂಕವನ್ನಾದರೂ ತಂದುಕೊಳ್ಳದೆ ಸಾಯೋಣ . . .

**ಮಾರ್ಕೊ :** ಆಃ, ಗ್ವೀಡೊ, ಈ ಪರೀಕ್ಷೆ ಉಗ್ರವಾದದ್ದು, ನಾನು ಬಲ್ಲೆ. ಈಗ, ಆಘಾತ ಮೇಲೆ ಎರಗಿರುವಾಗ, ಶಾಂತಿಯಿಂದಿರೋಣ. ಕರ್ತವ್ಯ ಪಾಲನೆ ದೊಡ್ಡದೋ, ಸ್ವಂತ ದುಃಖ ದೊಡ್ಡದೋ ಎಂಬುದನ್ನು ವಿಚಾರವು ನಿಧಾನವಾಗಿ ಇತ್ಯರ್ಥಪಡಿಸಲಿ ! . . .

**ಗ್ವೀಡೊ :** ಕರ್ತವ್ಯಪಾಲನೆ ! ನನ್ನ ಕರ್ತವ್ಯಪಾಲನೆ ನನಗೆ ಸ್ಪಷ್ಟ. ನಿನ್ನ ಈ ಆಸುರೀ ಸಲಹೆಯಿಂದ ನನ್ನ ಪಾಲಿಗೆ ಬಂದಿರುವ ಕರ್ತವ್ಯಪಾಲನೆ ಯೆಂದರೆ, ಒಂದೇ ಒಂದು. ಅದಕ್ಕೆ ದೀರ್ಘವಾದ ಆಲೋಚನೆ ಅಗತ್ಯವಿಲ್ಲ.

**ಮಾರ್ಕೊ :** ಆದರೂ, ಪ್ರಜಾವರ್ಗವನ್ನೇ ಬಲಿಕೊಡುವುದು ನಿನಗೆ ಧರ್ಮವೆ, ಸಾವಿರಾರು ಜೀವಗಳನ್ನು ತೆರುವ ಬೆಲೆ ಅಧಿಕವಲ್ಲವೇ, ಎಂದು ನೀನು ಯೋಚಿಸಬೇಕು . . . ಈ ಆಯ್ಕೆಯಿಂದ ನಿನ್ನೊಬ್ಬನ ಸುಖವು ಮಾತ್ರ ನಿರ್ಣೀತವಾಗುವುದಾಗಿದ್ದರೆ, ನೀನು ಸಾವೇ ಮೇಲೆನ್ನುವುದನ್ನು ನಾನು ಅರ್ಥ ಮಾಡಿಕೊಳ್ಳಬಲ್ಲೆ. ನನಗೋ ವಯಸ್ಸಾಗಿ, ಆಯುಷ್ಯ ಕಡೆಗೆ ಬಂದಿದೆ ;

ಅನೇಕರನ್ನು ನೋಡಿ, ಅದರಿಂದಲೇ ಬಹು ಮನುಷ್ಯರ ದುಃಖವನ್ನು ಕಂಡಿರುವವನಿಗೆ—ಯಾವ ನೈತಿಕವಾದ ಶಾರೀರಕವಾದ ಅನರ್ಥವಾದರೂ ಅದು ಸಾವಿಗಿಂತ ವಾಸಿ ಎನ್ನಿಸುತ್ತದೆ. ಸಾವೆಂಬುದರಲ್ಲಿ ಸಂತೋಷವಿಲ್ಲ, ಸಾವೆಂಬುದು ಭಯಂಕರ, ಸಾವೆಂಬುದು ಶಾಶ್ವತವಾದ ನಿಶ್ಶಬ್ದ . . . ಇಲ್ಲಿಯೋ ಸಾವಿರಾರು ಜೀವಗಳು ಪಣವಾಗಿವೆ; ಇದು ನಿನ್ನ ಜೊತೆಯ ಯೋಧರಿಗೂ ಅವರ ಹೆಂಡಿರು ಮಕ್ಕಳಿಗೂ ಸಂಬಂಧಿಸಿದ್ದು! . . . ಹುಚ್ಚನ ಆವೇಶಕ್ಕೆ ನೀನು ವಶನಾಗಿ, ಯಾವುದು ಈಗ ನಿನಗೆ ಆಸುರವೆಂದು ತೋರುವುದೋ ಅದನ್ನೇ ಅನಂತರದ ಕಾಲದವರು ಉದಾತ್ತವೆಂದು ಕರೆಯುವರು. ಏಕೆಂದರೆ, ಅವರು ಇನ್ನೂ ಸಮಾಧಾನದ ದೃಷ್ಟಿಯಿಂದ, ಇನ್ನೂ ಹೆಚ್ಚಿನ ನ್ಯಾಯಬುದ್ಧಿಯಿಂದ, ಇನ್ನೂ ಹೆಚ್ಚಿನ ಅನುಕಂಪದಿಂದ ಇದನ್ನು ತೀರ್ಮಾನಿಸುವರು . . . ನಾನು ಹೇಳುವುದನ್ನು ನಂಬು: ಜೀವದಾನಕ್ಕೆ ಸಮನಾದದ್ದು ಇನ್ನೊಂದಿಲ್ಲ. ಶೀಲಗಳು, ಆದರ್ಶಗಳು, ಯಾವುದನ್ನು ಮಾನ ಮರ್ಯಾದೆ ಸ್ನೇಹ ವಿಶ್ವಾಸ ಎಂದು ಕರೆಯುತ್ತೇವೆಯೋ ಅವು, . . . ಇವೆಲ್ಲವೂ ಆ ಜೀವದಾನದ ಮುಂದೆ ಕೇವಲ ತೃಣ ಸಮಾನವಾದುವು. . . . ಈ ಉಗ್ರಪರೀಕ್ಷೆಯನ್ನು ವೀರನಂತೆ ಎದುರಿಸಬೇಕು, ಕಳಂಕ ಯಾವುದೂ ತಾಕದಂತೆ ಇದನ್ನು ನಿವಾರಿಸಬೇಕು, ಎಂಬುದೊಂದೇ ಈಗ ನಿನ್ನ ಬಯಕೆ; ಆದರೆ, ಸಾವನ್ನು ಸಾಧಿಸುವುದೇ ವೀರದ ಅತ್ಯುನ್ನತ ಶಿಖರವೆಂಬ ನಿನ್ನ ನಂಬಿಕೆ ತಪ್ಪು . . . ಯಾವುದಕ್ಕೆ ಹೆಚ್ಚು ತೆರಬೇಕಾಗಿರುವುದೋ ಅದೇ ಅತ್ಯಂತ ವೀರವಾದ ಕಾರ್ಯ; ಅನೇಕ ವೇಳೆ, ಸಾಯುವುದು ಬದುಕಿರುವುದಕ್ಕಿಂತ ಸುಲಭ . . .

**ಗ್ವೀಡೊ**: ನನ್ನ ತಂದೆಯೇ ನೀನು ?

**ಮಾರ್ಕೊ**: ಹೌದು, ನಿನ್ನ ತಂದೆಯೆಂಬುದು ನನಗೆ ಹೆಮ್ಮೆ . . . ಈಹೊತ್ತು ನಿನ್ನನ್ನು ಪ್ರತಿಭಟಿಸುವುದರಲ್ಲಿ ನಾನು ನನ್ನನ್ನೂ ಪ್ರತಿಭಟಿಸಿಕೊಳ್ಳುತ್ತಿದ್ದೇನೆ. ನೀನೇನಾದರೂ ಬಲು ಸುಲಭವಾಗಿ ಒಪ್ಪಿದ್ದಿದ್ದರೆ, ನನಗೆ ನಿನ್ನ ಮೇಲಿನ ಪ್ರೀತಿ ಕುಗ್ಗುತ್ತಿತ್ತು . . .

**ಗ್ವೀಡೊ**: ಹೌದು, ನೀನು ನನ್ನ ತಂದೆ, ಅದಕ್ಕೆ ಪ್ರಮಾಣ ಕೊಟ್ಟಿದ್ದೀಯೆ; ನಿನ್ನ ಪಾಲಿಗೆ ನೀನು ಕೂಡ ಸಾವನ್ನೇ ಆರಿಸಿಕೊಳ್ಳುವೆಯಂತೆ; ಈ ಅಸಹ್ಯದ ಒಪ್ಪಂದವನ್ನು ನಾನು ನಿರಾಕರಿಸುವುದರಿಂದ, ನೀನು ಶತ್ರುಪಾಳೆ

ಯಕ್ಕೆ ಹಿಂದಿರುಗಿ, ಅಲ್ಲಿ ಫ್ಲಾರೆನ್ಸ್ ನಿನಗಾಗಿ ಕಾದಿರಿಸಿರುವ ಗತಿಯನ್ನು ಪಡೆಯುವೆಯಂತೆ . . .

**ಮಾರ್ಕೊ:** ಮಗು, ಇದು ನನ್ನೊಬ್ಬನಿಗೆ ಮಾತ್ರ ಸಂಬಂಧಿಸಿದ್ದು—ನಾನು ಅಶಕ್ತ, ಉಪಯೋಗವಿಲ್ಲದ ಮುದಿಯ, ಕೆಲವು ವರ್ಷ ಮಾತ್ರ ಬದುಕಬಹುದು, ಯಾರಿಗೆ ನನ್ನಿಂದ ಏನು ಪ್ರಯೋಜನ?—ಆದ್ದರಿಂದಲೇ, ಯಾವುದೋ ಹಳೆಯ ಚಪಲವನ್ನು ತೀರಿಸಿಕೊಳ್ಳುವೆನೆಂದುಕೊಂಡೆ, ಬುದ್ಧಿವಂತನಾಗಲು ಅಪೇಕ್ಷಿಸುವವನು ಏನು ಮಾಡಬೇಕೆಂದು ಗೊತ್ತೋ ಅದನ್ನು ಮಾಡಬೇಕೆಂದುಕೊಂಡೆ . . . ನಾನು ಅಲ್ಲಿಗೆ ಏಕೆ ಹೋಗುವೆನೆಂದು ನಾನು ಅರಿಯೆ . . . ಈ ದೇಹಕ್ಕೆ ಮುಪ್ಪಾಗಿದ್ದರೂ ಒಳಗಿನ ಜೀವಕ್ಕೆ ಇನ್ನೂ ಯೌವನ; ಯಾವ ಕಾಲದಲ್ಲಿ ವಿಚಾರಶಕ್ತಿಗೆ ಹೆಚ್ಚು ಅವಕಾಶವಿರಲಿಲ್ಲವೋ ಆ ಕಾಲದವನು ನಾನು . . . ಆಡಿದ ಮಾತನ್ನು ಮುರಿಯದಂತೆ ಈ ಹಳೆಯ ಕಾಲದ ಅನೇಕ ಪ್ರಭಾವಗಳು ಹೀಗೆ ಅಡ್ಡಿಯಾಗುತ್ತಿವೆಯೆಂಬುದು ನನ್ನ ವ್ಯಸನ . . .

**ಗ್ವೀಡೊ:** ನಾನೂ ನಿನ್ನಂತೆಯೇ ಮಾಡುತ್ತೇನೆ . . .

**ಮಾರ್ಕೊ:** ಹಾಗೆಂದರೆ?

**ಗ್ವೀಡೊ:** ನಿನ್ನ ಮೇಲ್ಪಂಕ್ತಿಯನ್ನು ಅನುಸರಿಸುತ್ತೇನೆ. ಅದೃಷ್ಟವಶದಿಂದ ನೀನು ಯಾವ ಹಳೆಯ ಕಾಲದ ಪ್ರಭಾವಕ್ಕೆ ವಶನಾಗಿ ವರ್ತಿಸುತ್ತಿರುವೆಯೋ, ಯಾವ ಹಳೆಯ ಕಾಲದ ಪ್ರಭಾವಗಳನ್ನು ನೀನು ಅರ್ಥವಿಲ್ಲದವು ಎಂದೆಯೋ, ಅವುಗಳನ್ನು ನಾನೂ ಎಂದಿಗೂ ಬಿಡದೆ ವರ್ತಿಸುತ್ತೇನೆ . . .

**ಮಾರ್ಕೊ:** ಇತರರ ವಿಷಯದ ಸಂಬಂಧದಲ್ಲಿ ನಾನು ಅವುಗಳನ್ನು ಆಚೆ ಎಸೆಯುತ್ತೇನೆ; ಮತ್ತೆ, ನಿನ್ನ ಜೀವಕ್ಕೆ ನನ್ನ ಪ್ರೋತ್ಸಾಹ ಬೇಕೆಂದು ಕಾಣುತ್ತದೆ, ನನ್ನ ಪಾಗ್ದಾನವನ್ನು ಬಲಿಕೊಡಬೇಕೆಂದು ಕೇಳುವಂತೆ ತೋರುತ್ತದೆ, ಆದ್ದರಿಂದ ಕೊಟ್ಟ ಮಾತಿನಂತೆ ನಡೆಯಬೇಕೆಂಬುದನ್ನು ಮನಸಾ ತ್ಯಜಿಸಿದ್ದೇನೆ. ಏನು ಬೇಕಾದರೂ ಆಗಲಿ, ನೀನು ಏನೇ ಇತ್ಯರ್ಥ ಮಾಡು, ನಾನು ಅಲ್ಲಿಗೆ ಹೋಗುವುದಿಲ್ಲ . . .

**ಗ್ವೀಡೊ:** ಸಾಕು! ತಪ್ಪುದಾರಿ ಹಿಡಿದ ತಂದೆಗೆ ಮಗನಾದವನು ಹೇಳಬಾರದ ಸಂಗತಿಗಳೂ ಉಂಟು . . .

**ಮಾರ್ಕೊ :** ಹೇಳಬೇಕೆನಿಸಿದ್ದನ್ನು ಹೇಳು, ಮಗು : ಕೋಪದಿಂದ ಬರುವ ಮಾತುಗಳು ಹೃದಯದಿಂದ ತಡೆಯಿಲ್ಲದೆ ಹರಿದುಬರಲಿ . . . ನ್ಯಾಯ ವಾಗಿ ನೀನು ಪಡಬೇಕಾದ ಅತ್ಯಂತ ದುಃಖದ ಚಿಹ್ನೆ ಯಿದೆಂದು ನಾನು ಅದನ್ನು ಗಣಿಸುತ್ತೇನೆ . . . ಏನೇ ಮಾತನಾಡಿದರೂ, ನನಗೆ ನಿನ್ನ ಮೇಲಿರುವ ಪ್ರೀತಿ ಬದಲಾಗದು . . . ಆದರೆ, ನನ್ನನ್ನು ಶಪಿಸುವಾಗ, ನಿನ್ನ ಅಂತರಂಗದಿಂದ ಶಾಪಗಳು ಬಿಟ್ಟುಬಂದ ಸ್ಥಳದಲ್ಲಿ ವಿಚಾರವೂ ಕೋಮಲವಾದ ಕರುಣೆಯೂ ಬಂದು ತುಂಬಿಕೊಳ್ಳಲಿ . . .

**ಗ್ವೀಡೊ :** ಸಾಕು : ಇನ್ನು ಕೇಳುವುದು ಬೇಡ . . . ಯೋಚಿಸಿ ನೋಡು ; ನಾನು ಏನು ಮಾಡಬೇಕೆಂದು ಬಯಸುವೆಯೋ ಅದನ್ನು ಕುರಿತು ಪರ್ಯಾಲೋಚಿಸಲು ಪ್ರಯತ್ನಿಸು: ಏಕೆಂದರೆ, ಈ ಕ್ಷಣದಲ್ಲಿ, ವಿಚಾರ ಸಾಲದೆ ಬಂದಿರುವುದು–ನಿನಗೆ ; ಉದಾತ್ತವೂ ಉನ್ನತವೂ ಆದ ವಿಚಾರದ ಕೊರತೆ— ನಿನಗೆ ; ಸಾವಿನ ಭೀತಿಯಿಂದ ಬುದ್ಧಿ ಕದಡಿಹೋಗಿರುವ ನಿನಗೆ . . . ಸಾವಿಗೆ ಹೆದರುವವನು ನಾನಲ್ಲ . . . ಈಗಲೂ ನನಗೆ ನೆನಪಾಗುತ್ತದೆ : ವಯಸ್ಸಾದದ್ದ ರಿಂದಲೂ, ಪುಸ್ತಕಗಳ ವ್ಯರ್ಥವಾದ ಅಧ್ಯಯನದಿಂದಲೂ ನಿನ್ನ ಧೈರ್ಯವು ಕುಗ್ಗುವ ಮೊದಲು ನೀನು ನನಗೆ ಧೈರ್ಯವನ್ನು ಉಪದೇಶಿಸುತ್ತಿದ್ದ ಕಾಲ ವೊಂದಿತ್ತು . . . ಈ ಕೊಠಡಿಯಲ್ಲಿ ಇರುವವರು ನಾವುನಾವೇ. ನೋಡಿದರೆ ಅಯ್ಯೋ ಎನ್ನಿಸುವ ನಿನ್ನ ಈ ದೌರ್ಬಲ್ಯವನ್ನು ಯಾರೂ ಕಂಡದ್ದಿಲ್ಲ; ನನ್ನ ಇಬ್ಬರು ದಳಪತಿಗಳೂ ನಾನೂ ಈ ರಹಸ್ಯವನ್ನು ಕಾಪಾಡಿಕೊಳ್ಳುವೆವು. ಗುಟ್ಟನ್ನು ಕಾಪಾಡಬೇಕಾದದ್ದು ಕೊಂಚ ಕಾಲ ತಾನೆ! ಇದನ್ನೆಲ್ಲ ನಮ್ಮ ಹೃದಯಗಳಲ್ಲಿ ಅಡಗಿಸಿಬಿಡೋಣ ; ಈಗ ಕೊನೆಯ ಹೋರಾಟವನ್ನು ಕುರಿತು ಯೋಚಿಸೋಣ . . .

**ಮಾರ್ಕೊ :** ಆಗದು, ಮಗು, ಅದನ್ನು ಅಡಗಿಸುವುದು ಆಗದು; ನನಗೆ ಇಷ್ಟು ವಯಸ್ಸಾದದ್ದೂ, ನೀನು ವ್ಯರ್ಥವೆಂದೆಣಿಸುವ ವ್ಯಾಸಂಗಗಳೂ ನನಗೆ ಇದನ್ನು ಕಲಿಸಿವೆ; ಏನೆಂದರೆ : ಕಾರಣ ಯಾವುದಾದರೂ ಇರಲಿ, ಒಬ್ಬ ಮನುಷ್ಯನ ಜೀವನವನ್ನು ಅಡಗಿಸಿಡುವುದು ಎಂದಿಗೂ ನ್ಯಾಯವಾಗದು. ಯಾವ ಧೈರ್ಯವೊಂದನ್ನೇ ನೀನು ಇಷ್ಟು ಮೆಚ್ಚಿಕೊಳ್ಳುವೆಯೋ ಆ ಧೈರ್ಯವು ದಿಟವಾಗಿಯೂ ನನಗೆ ಈಗ ಇಲ್ಲದೆ ಹೋದರೂ, ನನಗೆ ಬೇರೆಯೊಂದು ಇದೆ ;

ಅದು ಬಹುಶಃ ಕಣ್ಣನ್ನು ಅಷ್ಟು ಕೋರೈಸದಿರಬಹುದು, ಜನರು ಅದನ್ನು ಅಷ್ಟಾಗಿ ಗೌರವಿಸದಿರಬಹುದು; ಏಕೆಂದರೆ, ಅದು ಸಾಧಿಸುವುದು ಸ್ವಲ್ಪ, ಅಲ್ಲದೆ ಜನರು ತಮಗೆ ಯಾವುದು ದುಃಖವನ್ನು ತರುತ್ತದೋ ಅದನ್ನೇ ಅತ್ಯಂತವಾಗಿ ಮೆಚ್ಚಿಕೊಳ್ಳುತ್ತಾರೆ . . . . ನನ್ನ ಕರ್ತವ್ಯದ ಶೇಷವನ್ನು ತೀರಿಸಲು ಇದು ನನಗೆ ಅನುಕೂಲವಾಗುತ್ತದೆ . . .

**ಗ್ವೀಡೊ:** ಯಾವುದಿರಬಹುದೊ, ಆ ಕರ್ತವ್ಯ ?

**ಮಾರ್ಕೊ:** ಇಷ್ಟು ನಿಷ್ಫಲವಾಗಿ ನಾನು ಆರಂಭಿಸಿರುವುದನ್ನು ಮುಗಿಸಿಯೇ ಬಿಡುತ್ತೇನೆ . . . ಇದನ್ನು ಅರ್ತ್ಯರ್ಥಪಡಿಸುವವನು ನೀನೊಬ್ಬನೇ ಅಲ್ಲ, ನಿನ್ನಂತೆ ಇನ್ನೂ ಇತರರು ಇದ್ದಾರೆ; ಯಾವುಯಾರ ಅಳಿವೂ ಉಳಿವೂ ಈ ಗಳಿಗೆಯನ್ನು ಅವಲಂಬಿಸಿಕೊಂಡಿರುವುದೋ ಅವರಿಗೆ ತಮ್ಮ ಗತಿ ತಿಳಿಯಬೇಕಾದದ್ದು ನ್ಯಾಯ, ಯಾವುದರಿಂದ ತಮ್ಮ ಉದ್ಧಾರವಾಗುತ್ತದೆ ಎಂಬುದನ್ನು ಅವರಿಗೆ ಹೇಳಬೇಕಾದದ್ದು ಧರ್ಮ . . .

**ಗ್ವೀಡೊ :** ನೀನು ಹೇಳುವುದು ನನಗೆ ಅರ್ಥವಾಗದು. ಅರ್ಥವಾಗುವುದಿಲ್ಲ, ಎಂದುಕೊಂಡಿದ್ದೇನೆ. ಏನೋ ಹೇಳುತ್ತಿದ್ದೆ . . .

**ಮಾರ್ಕೊ :** ಏನು ಹೇಳುತ್ತಿದ್ದೆನೆಂದರೆ : ಈ ಕೊಠಡಿಯನ್ನು ಬಿಟ್ಟ ಕೂಡಲೆ ಜನರಿಗೆ ಇದನ್ನು ತಿಳಿಸಿಬಿಡುತ್ತೇನೆ; ಪ್ರಿನ್‌ಸಿವಲ್ಲೆ ಹೀಗೆ ಹೀಗೆ ಹೇಳಿದ, ಅದನ್ನು ನೀನು ನಿರಾಕರಿಸಿದೆ, ಎಂದು . . .

**ಗ್ವೀಡೊ :** ಒಳ್ಳೆಯದು ! ಈಗ ಅರ್ಥವಾಯಿತು. ಸುಮ್ಮನೆ ಶುಷ್ಕವಾಗಿ ಮಾತನಾಡಿದೆನಲ್ಲ, ಎಂದು ನನಗೆ ಸಂಕೋಚವಾಗುತ್ತದೆ; ನಿನ್ನ ವಯಸ್ಸಿಗೆ ನಾನು ಸಲ್ಲಿಸಬೇಕಾದ ಗೌರವಕ್ಕೆ ನಿನ್ನ ಭ್ರಾಂತಿಭ್ರಮೆಗಳು ಅಡ್ಡವಾಗಿ ಬಂದುವೆಂದು ನನಗೆ ಶೋಕವಾಗುತ್ತಿದೆ . . . ಆದರೆ, ಭ್ರಮಿಸಿದ ತಂದೆಯು ತನಗೆ ತಾನೇ ಗಾಸಿಗೊಳ್ಳದಂತೆ ಅವನನ್ನು ರಕ್ಷಿಸಬೇಕಾದದ್ದು ಮಗನಾದವನ ಕರ್ತವ್ಯ; ಪೀಸಾ ಇರುವವರೆಗೂ ನಾನು ಇಲ್ಲಿ ಯಜಮಾನ, ಈ ನಗರದ ಗೌರವ ನನ್ನ ವಶದಲ್ಲಿ . . . ಬೋರ್ಸೊ, ಟೊರೆಲ್ಲೊ ! ಈತನ ಆತ್ಮಸಾಕ್ಷಿಯು ಈತನಿಗೆ ಜ್ಞಾನೋದಯವನ್ನು ಉಂಟುಮಾಡುವವರೆಗೂ ಈತನನ್ನು ನಿಮ್ಮ ವಶಕ್ಕೆ ಒಪ್ಪಿಸಿದ್ದೇನೆ. ಏನೂ ನಡೆದದ್ದಿಲ್ಲ ! . . . ಯಾರಿಗೂ ಗೊತ್ತಾಗುವುದಿಲ್ಲ . . . ಅಪ್ಪಾ, ನಿನ್ನನ್ನು ಕ್ಷಮಿಸುತ್ತೇನೆ; ನಿನ್ನ ಬುದ್ಧಿ ನಿನ್ನ ಕೈಯಲ್ಲಿರಲಿ,

ಹೆದರದೆ ಇರು, ಎಂದು ಹಿಂದೆ ನೀನು ನನಗೆ ಕಲಿಸಿದ್ದನ್ನು ನಿನ್ನ ಕೊನೆಯ ಗಳಿಗೆಯಲ್ಲಿ ಜ್ಞಾಪಿಸಿಕೊಂಡಾಗ, ನೀನೂ ನನ್ನನ್ನು ಕ್ಷಮಿಸುವೆ . . .

**ಮಾರ್ಕೊ :** ನಿನ್ನನ್ನು ಕ್ಷಮಿಸುವುದಕ್ಕೋಸ್ಕರ ನಾನು ನನ್ನ ಕಡೆಯ ಗಳಿಗೆಯವರೆಗೂ ಕಾಯುವ ಅಗತ್ಯವಿಲ್ಲ, ಮಗು . . . ನಾನೂ ನಿನ್ನಂತೆಯೇ ನಡೆಯುವವನೇ . . .ನೀನು ನನ್ನನ್ನು ಸೆರೆಯಿಡಬಹುದೇ ಹೊರತು, ನನ್ನ ಗುಟ್ಟನ್ನು ಸೆರೆಯಿಡಲಾರೆ; ಅದು ಸ್ವತಂತ್ರವಾದದ್ದು, ಇನ್ನು ಅದರ ಬಾಯಿ ಮುಚ್ಚಿಡುವುದು ಸಾಧ್ಯವಿಲ್ಲ . . .

**ಗ್ವೀಡೊ :** ಏನಿದು ? ಇದು ಏನು ನೀನು ಹೇಳುವುದು?

**ಮಾರ್ಕೊ:** ಇದೇ ಈ ಕ್ಷಣದಲ್ಲಿಯೇ ಪ್ರಿನ್ಸಿವಲ್ಲಿಯ ಯೋಜನೆ ನಿಬಂಧನೆಗಳನ್ನು ಮಂತ್ರಿಮಂಡಲದವರು ಚರ್ಚೆಮಾಡುತ್ತಿದ್ದಾರೆ . . .

**ಗ್ವೀಡೊ :** ಮಂತ್ರಿಮಂಡಲ ! ಅವರಿಗೆ ತಿಳಿಸಿದವರು ಯಾರು?

**ಮಾರ್ಕೊ :** ನಾನು ಅವರಿಗೆ ತಿಳಿಸಿದೆ, ಇಲ್ಲಿಗೆ ಬರುವ ಮೊದಲು.

**ಗ್ವೀಡೊ :** ನೀನು! ಇಲ್ಲ, ಇಲ್ಲ, ಇದು ಅಸಂಭವ! ನೀನು ಎಷ್ಟೇ ಭಯಗ್ರಸ್ತನಾಗಿರಬಹುದಾಗಿದ್ದರೂ, ವಾರ್ಧಿಕ್ಯದಿಂದ ಎಷ್ಟೇ ಹೃದಯಹೀನನಾಗಿರಬಹುದಾದರೂ ನನ್ನ ಜೀವನದ ಏಕಮಾತ್ರ ಆನಂದವನ್ನು, ನನ್ನ ಪ್ರೇಮ ಪುತ್ಥಳಿಯನ್ನು, ನಮ್ಮ ದಾಂಪತ್ಯದ ಸೌಂದರ್ಯ ಶುಚಿತ್ವಗಳನ್ನು ಆ ಅಪರಿಚಿತರ, ಕ್ಷುದ್ರ ವ್ಯಾಪಾರಿಗಳ, ಉಪ್ಪು ಎಣ್ಣೆಗಳೆಂಬಂತೆ ತೂಗಿ ಅಳೆದು ನೋಡುವವರ ಕೈಗೆ ನೀನು ಒಪ್ಪಿರಲಾರೆ! . . . ನಾನು ಇದನ್ನು ನಂಬಲಾರೆ . . . ನನ್ನ ಕಣ್ಣಾರೆ ಕಂಡ ಹೊರತು, ನಾನು ನಂಬಲೇ ಆರೆ . . . ಇದು ನಿಜವಾದರೆ, ಯಾರನ್ನು ಪ್ರೀತಿಸಿ 'ಇವನ ಮನಸ್ಸು ನನಗೆ ಗೊತ್ತು' ಎಂದುಕೊಂಡಿದ್ದೆನೋ, ಯಾರನ್ನು ನನಗೆ ಆದರ್ಶವೆಂದು ಸ್ವೀಕರಿಸಿದ್ದೆನೋ ಆ ತಂದೆಯಾದ ನಿನ್ನನ್ನು ಎಷ್ಟು ತುಚ್ಛವಾಗಿ ಕಾಣುವೆನೆಂದರೆ—ಈ ದಿವಸ ನಮ್ಮನ್ನೆಲ್ಲ ಈ ಅಯಶಸ್ಸಿನ ಕೆಸರಿನಲ್ಲಿ ಅದ್ದಿಹಾಕಿದ ಆ ನಿಕೃಷ್ಟನಾದ ಹೇಡಿಪಿಶಾಚನನ್ನು ಹೇಗೋ ಹಾಗೆ ಅದೇ ರೊಚ್ಚಿನಿಂದ ಅದೇ ದ್ವೇಷದಿಂದ ನಿನ್ನನ್ನು ನೋಡಿಯೇನು !

**ಮಾರ್ಕೊ:** ನಿಜವನ್ನೇ ಹೇಳಿದೆ, ಮಗು. ನನ್ನ ಮನಸ್ಸು ನಿನಗೆ ಗೊತ್ತಿಲ್ಲ; ಅದರ ತಪ್ಪು ನನ್ನದು. ನನಗೆ ಮುಪ್ಪುಬಂದ ಕಾಲದಲ್ಲಿ, ಬದುಕನ್ನೂ ಪ್ರೀತಿಯನ್ನೂ ಮನುಷ್ಯರ ಸುಖಗಳನ್ನೂ ದುಃಖಗಳನ್ನೂ ಕುರಿತು

ನಾನು ಪ್ರತಿದಿನವೂ ಏನೇನು ಕಲಿತೆನೆಂಬುದನ್ನು ನಿನಗೆ ತಿಳಿಸಲಿಲ್ಲ . . . ನನ್ನ ಹೃದಯದಲ್ಲಿ ಏನೇನಾಗುತ್ತಿದೆ, ಯಾವ ವ್ಯರ್ಥಭಾವಗಳು ಅಲ್ಲಿಂದ ತೊಲಗಿ ಅದರ ಸ್ಥಾನದಲ್ಲಿ ಯಾವ ಸಾರ್ಥಭಾವಗಳು ನೆಲಸುತ್ತಿವೆ, ಎಂಬಿವನ್ನೆಲ್ಲಾ ಈ ಮೊದಲೇ ನಿನಗೆ ಪರಿಚಯಮಾಡಿಸಿದ್ದೆನಾದರೆ, ಈಗ ಹೀಗೆ, ನೀನು ದ್ವೇಷಿಸತೊಡಗಿರುವ ಯಾವುದೋ ನಿರ್ಭಾಗ್ಯ ಅಪರಿಚಿತನಂತೆ ನಿನ್ನ ಮುಂದೆ ನಾನು ನಿಲ್ಲಬೇಕಾಗುತ್ತಿರಲಿಲ್ಲ . . .

**ಗ್ವೀಡೊ :** ಇನ್ನೂ ಮುಂಚೆ ನಿನ್ನ ವಿಷಯವನ್ನು ತಿಳಿಯಲಿಲ್ಲವೆಂದು ಅಷ್ಟಾದರೂ ನನಗೆ ಸಂತೋಷ . . . ಇನ್ನು ಇತರ ವಿಷಯ . . . ಮಂತ್ರಿ ಮಂಡಲದವರು ಏನು ನಿರ್ಧರಿಸುವರೆಂದು ಭವಿಷ್ಯ ಹೇಳುವುದು ಕಷ್ಟವಲ್ಲ. ತಾವು ಬದುಕಿಕೊಳ್ಳುವುದಕ್ಕಾಗಿ ಅವರು ಒಬ್ಬನನ್ನು ಬಲಿಕೊಡಬೇಕಷ್ಟೆ, ಅದೂ ಎಷ್ಟು ಸುಲಭ! ಎಂತಹ ಧೀರೋದಾತ್ತರ ಧೈರ್ಯವಾದರೂ ಇಂತಹ ಮೋಹದೆದುರು ಮುರಿದುಬೀಳುವುದೆಂದಮೇಲೆ, ಬಡವರ್ತಕರಿಂದ ಇದಕ್ಕಿಂತ ಹೆಚ್ಚು ನಿರೀಕ್ಷಿಸುವುದು ಯಾವ ನ್ಯಾಯ! ಆದರೂ, ಅವರು ಹುಷಾರಾಗಿರಲಿ! ಇಷ್ಟು ಅತಿಯನ್ನು ಅಪೇಕ್ಷಿಸಬಾರದು. ಕೇಳುವುದರಲ್ಲಿ ಮಿತಿ ಮೀರದಿರಲಿ. ಅವರಿಗಾಗಿ ನನ್ನ ರಕ್ತ ಬಸಿದಿದ್ದೇನೆ; ಹಗಲೂ ರಾತ್ರೆ ದುಡಿದಿದ್ದೇನೆ, ಸಹಿಸಿದ್ದೇನೆ; ಈ ದೀರ್ಘವಾದ ಮುತ್ತಿಗೆಯ ಉದ್ದಕ್ಕೂ ಬಿಡುವಿಲ್ಲದೆ ಸವೆದಿದ್ದೇನೆ. ಇಷ್ಟು ಸಾಕು : ಇನ್ನು ಹೆಚ್ಚು ಮಾಡಲೊಲ್ಲೆ! ವನ್ನಾ ನನ್ನವಳು! ಆಕೆ ನನಗೆ ಸೇರಿದವಳು, ಇನ್ನೂ ಇಲ್ಲಿ ನನಗೆ ಅಧಿಕಾರವುಂಟು! ಕಡೆಯಪಕ್ಷ, ನನ್ನ ಸ್ಟ್ರಾಡಿಯೋಟಿ ದಳದವರಾದರೂ ನಂಬಿಕಸ್ತರಾಗಿ ನಿಲ್ಲುತ್ತಾರೆ; ಹೇಡಿಗಳ ಹಿತವಚನಗಳನ್ನು ಕಿವುಡುಕೇಳಿ, ನನ್ನ ಮಾತೊಂದಕ್ಕೇ ಕಿವಿಕೊಡುವ ಮೂರುನೂರು ಜನ ನನಗುಂಟು!

**ಮಾರ್ಕೊ :** ನಿನ್ನ ತಿಳಿವಳಿಕೆ ತಪ್ಪು, ಮಗು. ಪೀಸಾದ ಮಂತ್ರಿ ಮಂಡಲದವರೂ, ಅವರ ತೀರ್ಮಾನವೇನಿರಬಹುದೆಂದು ತಿಳಿಯುವುದಕ್ಕೆ ಮುಂಚೆಯೇ ಯಾರನ್ನು ಕುರಿತು ಇಷ್ಟು ಹಗುರವಾಗಿ ಮಾತನಾಡುವೆಯೋ ಆ ಪುರಜನರೂ ಈ ಸಂಕಟದ ಸಮಯದಲ್ಲಿ ಶ್ಲಾಘ್ಯವಾದ ಘನತೆಯನ್ನೂ ಧೈರ್ಯವನ್ನೂ ತೋರಿದ್ದಾರೆ. ಹೆಂಗುಸೊಬ್ಬಳ ಪ್ರೇಮವನ್ನು ಬಲಿಕೊಟ್ಟು ಪಡೆಯುವ ಕ್ಷೇಮವು ನಮಗೆ ಬೇಡ, ಎಂದಿದ್ದಾರೆ; ನಾನು ಅವರನ್ನು ಬಿಟ್ಟು

ನಿನ್ನ ಬಳಿಗೆ ತ್ವರೆಯಿಂದ ಹೊರಟಾಗ, ಅವರು ವನ್ನಳಿಗೆ ಹೇಳಿ ಕಳಿಸಿದ್ದರು : 'ಪೀಸಾ ನಗರದ ಗತಿಯನ್ನು ನಿನ್ನ ಮಡಿಲಿಗೆ ಹಾಕಿದ್ದೇವೆ' ಎಂದು ಹೇಳು ವುದಕ್ಕೆ . . .

**ಗ್ವೀಡೊ :** ಏನು! ಅಷ್ಟು ಗುಂಡಿಗೆ ಅವರಿಗೆ! ನಾನಿಲ್ಲದ ಹೊತ್ತಿನಲ್ಲಿ ಆ ಅಸಹ್ಯದ ನರಮೃಗದ ಹೊಲಸುಮಾತುಗಳನ್ನು ಅವಳೆದುರು ಆಡುವುದಕ್ಕೆ ಧೈರ್ಯ ಬಂತೆ ಅವರಿಗೆ! . . . ನನ್ನ ವನ್ನಾ ! . . . ಒಂದೇ ಈಕ್ಷಣದಿಂದ ಆರಕ್ತವಾಗುವ ಅವಳ ಆ ಮುದ್ದುಮುಖವನ್ನು ಜ್ಞಾಪಿಸಿಕೊಂಡರೆ, ಅವಳ ಸೌಂದರ್ಯವನ್ನು ಮತ್ತಷ್ಟು ಚೆಲುವಾಗಿಸುವ ಆ ಎಚ್ಚರ ತಪ್ಪದ ಲಜ್ಜೆಯನ್ನು ನೆನೆದರೆ! ಯಾವಳನ್ನು ಸದಾ ಪವಿತ್ರವಸ್ತುವೆಂದು ಭಾವಿಸಿದ್ದರೋ ಆ ನನ್ನ ವನ್ನ, ಈ ಪೋಕರಿ ಮುದಿಯರ ಎದುರಿಗೆ, ಈ ಕ್ಷುದ್ರ ದರಿದ್ರಮುಖರಾದ ಕಪಟವರ್ತಕರ ಮುಂದೆ, ನಿಲ್ಲುವಂತಾಯಿತೆ! " ಹೋಗು, ಹೋಗು ಅಲ್ಲಿಗೆ, ನಗ್ನಳಾಗಿ, ಒಂಟಿಯಾಗಿ, ಆ ರೂಕ್ಷನವನ ಗುಡಾರಕ್ಕೆ! ಅವನು ಹೇಳಿದಂತೆ ಕೇಳು !" ಎಂದು ಅವರು ಅವಳಿಗೆ ಹೇಳಿರುತ್ತಾರೆ. ನಿಜವೇ, ಅವರು ಬಲಾತ್ಕಾರಪಡಿಸಲಿಲ್ಲವೆಂಬುದು ಉದಾತ್ತವಾದದ್ದೆ ! ನಾನು ಇನ್ನೂ ಇಲ್ಲೇ ಇರುವೆನೆಂಬುದನ್ನು ಅವರು ಬಲ್ಲರು. **ಅವಳ** ಒಪ್ಪಿಗೆಯನ್ನು ಕೇಳುವರು, ಎಂದೆಯಲ್ಲವೆ! ನನ್ನ ಒಪ್ಪಿಗೆ—ಅದನ್ನು ಕೇಳುವ ಧೈರ್ಯ ಯಾರಿಗೆ ?

**ಮಾರ್ಕೊ :** ನಾನು ಕೇಳಿಲ್ಲವೆ, ಮಗು ? ನನಗೆ ನೀನು ನಿರಾಕರಿಸಿ ದರೆ, ಅವರ ಸರದಿ, ಅವರೂ ಬರುವರು . . .

**ಗ್ವೀಡೊ :** ಬರಲಿ ! ನಮ್ಮಿಬ್ಬರ ಪರವಾಗಿ ವನ್ನಾ ಹೇಳಿರುತ್ತಾಳೆ . . .

**ಮಾರ್ಕೊ :** ಹಾಗೇ ಆದೀತೆಂದು, ಅವಳ ಉತ್ತರವನ್ನು ನೀನೂ ಒಪ್ಪುವೆಯೆಂದು, ನನ್ನ ಹಾರೈಕೆ . . .

**ಗ್ವೀಡೊ :** ಅವಳ ಉತ್ತರ ! ನೀನು ಅವಳನ್ನು ಬಲ್ಲೆ ; ಯಾವ ಕೊಠಡಿಯಲ್ಲಿ ಈಗ ನೀನು ನಿಂತು ಅವಳನ್ನು ಮಾರಬೇಕೆಂದಿರುವೆಯೋ ಇಲ್ಲಿಯೇ, ಪ್ರೇಮದ ಮೃದುಹಾಸವನ್ನು ಕಣ್ಣುಗಳಲ್ಲಿ ಮಿನುಗಿಸುತ್ತ, ಇದೇ ಕೊಠಡಿಯ ಹೊಸಿಲನ್ನು ಅವಳು ದಾಟಬಂದ ಆ ದಿವಸದಿಂದ ನೀನು ಅವಳನ್ನು ಕಂಡಿದ್ದೀಯೆ ; ಅವಳ ವಿಷಯದಲ್ಲಿ ಸಂದೇಹವೇ ? ಅವಳ ಉತ್ತರವೇನೆಂದು ಶಂಕೆಯೆ ? . . .

**ಮಾರ್ಕೊ :** ಮಗು, ನಮ್ಮಲ್ಲಿ ಪ್ರತಿಯೊಬ್ಬನೂ ತನ್ನೊಳಗೆ ಏನು ಕಾಣುವನೋ ಅದಷ್ಟನ್ನು ಮಾತ್ರವೇ ಇತರರಲ್ಲೂ ಕಾಣುವನು, ಅಲ್ಲದೆ ತನ್ನ ಪರಿಜ್ಞಾನವೆಷ್ಟಿರುವುದೋ ಅಷ್ಟು ಮಟ್ಟಿಗೆ ಮಾತ್ರ ತನ್ನನ್ನು ತಾನು ತಿಳಿಯುವನು . . .

**ಗ್ವೀಡೊ :** ನಿನ್ನ ವಿಷಯವನ್ನು ನಾನು ಇಷ್ಟು ತಪ್ಪಾಗಿ ತಿಳಿದುದಕ್ಕೆ ಇದೇ ಕಾರಣವಿರಬೇಕು ! ಆದರೆ, ನನ್ನ ಈ ಕಣ್ಣುಗಳು ಇನ್ನೊಂದು ಬಾರಿ ಇಷ್ಟು ಅನ್ಯಾಯವಾಗಿ ಮೋಸಹೋಗುವುದಕ್ಕಿಂತ, ಇವು ಎಂದೆಂದಿಗೂ ಮುಚ್ಚಿಹೋದರೇ ಮೇಲೆಂದು ದೇವರನ್ನು ಬೇಡಿಯೇನು !

**ಮಾರ್ಕೊ :** ಬಹು ದೊಡ್ಡ ಬೆಳಕಿನ ಆಶ್ರಯದಲ್ಲಿ ಅವು ತೆರೆಯುವ ಸಮಯವಿರಬಹುದು, ಮಗು . . . ಹೀಗೆ ಏಕೆ ಹೇಳುವೆನೆಂದರೆ : ನೀನು ವನ್ನಳಲ್ಲಿ ನೋಡದೆ ಇರತಕ್ಕ ಏನೋ ಒಂದು ಸ್ಥೈರ್ಯವನ್ನು ನಾನು ಗಮನಿಸಿದ್ದೇನೆ. ಅದರಿಂದ, ಅವಳ ಉತ್ತರ ಏನಿರುವುದೆಂಬ ಬಗ್ಗೆ ನನಗೇನೂ ಸಂದೇಹವೇ ಇಲ್ಲ . . .

**ಗ್ವೀಡೊ :** ನಿನಗೇನೂ ಸಂದೇಹವೇ ಇಲ್ಲ ! ಆಃ, ಕೇಳು, ನನಗೂ ಇಲ್ಲ ! ಇದೋ ಮುಂಚಾಗಿ, ಕಣ್ಣುಮುಚ್ಚಿಕೊಂಡು, ಅವಳ ಉತ್ತರವನ್ನು ಒಪ್ಪಿಕೊಳ್ಳುತ್ತೇನೆ ! ತಪ್ಪಿದರೆ, ನನ್ನಾಣೆ ! ಅವಳದೂ ನನ್ನದೂ ಒಂದೇ ಅಲ್ಲದೆ ಹೋದರೆ, ಆ ಮೊದಲನೆಯ ಗಳಿಗೆಯಿಂದ ಈ ದುಃಖದ ಹೊತ್ತಿನ ವರೆಗೂ ನಾವು ಒಬ್ಬರನ್ನೊಬ್ಬರು ತಿಳಿದುದಿಲ್ಲ . . . ನಮ್ಮ ಪ್ರೇಮವೆಂಬುದು ಕೇವಲ ಮಿಥ್ಯೆಯಾಗಿ, ಈಗ ಪುಡಿಪುಡಿಗೊಂಡು ದೂಳಾಗುತ್ತಿದೆ; ಅವಳಲ್ಲಿ ನಾನು ಕಂಡು ಮೆಚ್ಚಿದ್ದೆಲ್ಲ ಈ ಕಂಡದ್ದನ್ನು ನಂಬಿಕೊಳ್ಳುವ ನನ್ನ ನಿರ್ಭಾಗ್ಯ ಬುದ್ಧಿಯ ಸೃಷ್ಟಿಮಾತ್ರವಾಗುತ್ತದೆ, ನನ್ನ ವಿಶ್ವಾಸದ ಹೃದಯವು ಕಂಡ ಒಂದು ಸುಖವು ಯಾವುದೋ ಭ್ರಾಂತಿಯನ್ನು ಆರಾಧಿಸಿದಂತೆ ಆಗುತ್ತದೆ . . .

**[ 'ವನ್ನಾ, ವನ್ನಾ' ಎಂಬ ಕೂಗು, ಹೊರಗಡೆಯ ಜನಸಂದಣಿಯಿಂದ, ಮೊದಲು ಗುಜುಗುಜುವಾಗಿ, ಅನಂತರ ಬರುಬರುತ್ತ ಗಟ್ಟಿಯಾಗಿ ಕೇಳಿಬರುವುದು. ಬಾಗಿಲು, ಹಿಂಭಾಗದಲ್ಲಿ, ತೆರೆದು, ವನ್ನಾ ಒಬ್ಬಳೇ, ವಿವರ್ಣಳಾಗಿ, ಕೊಠಡಿಯೊಳಕ್ಕೆ ಮುಂದೆ ಬರುವಳು ; ಹಿಂದೆ, ಗಂಡಸರೂ ಹೆಂಗುಸರೂ, ಒಳಗೆ ಬರಲು ಹೆದರಿಕೊಂಡಂತೆ ಇದೆ, ಬಾಗಿಲ ಮರೆಯಲ್ಲಿ ಅವಿತುಕೊಳ್ಳಲು**

ಯತ್ನಿಸುವರು. ಗ್ವೀಡೊ ಅವಳನ್ನು ಕಂಡು, ಅವಳ ಕಡೆಗೆ ಧಾವಿಸುವನು. ತನ್ನ ತೋಳುಗಳನ್ನು ಅವಳ ಸುತ್ತ ಬೀಸಿ, ಕಾತರದಿಂದ ಅವಳನ್ನು ಆಲಿಂಗಿಸಿಕೊಳ್ಳುವನು.]

**ಗ್ವೀಡೊ** : ನನ್ನ ವನ್ನಾ ! . . . ಏನು ಮಾಡಿದರು, ಏನು ಹೇಳಿದರು ನಿನಗೆ ! . . . ಬೇಡ, ಬೇಡ, ಹೇಳಬೇಡ . . . ನಿನ್ನ ಕಣ್ಣುಗಳನ್ನು ನೋಡಿದರೆ ಸಾಕು—ಸ್ವರ್ಗವಾಸಿಗಳು ಸ್ನಾನಮಾಡುವ ಚಿಲುಮೆಯಂತೆ ಎಲ್ಲವೂ ಇನ್ನೂ ಅಲ್ಲಿ ಸ್ವಚ್ಛವಾಗಿದೆ, ಸ್ನೇಹದಿಂದಿದೆ . . . ಆಃ, ಆ ಬುದ್ಧಿಯಿಲ್ಲದ ಮಂದಿ ! ನನ್ನ ಪ್ರಿಯ ವಸ್ತುವಿಗೆ ಅವರೇನು ಹಾನಿಮಾಡಿಯಾರು ! ಕಲ್ಲುಗಳನ್ನು ಗಾಳಿಗೆಸೆದು, ಗಗನವನ್ನು ಮುಟ್ಟಬಲ್ಲೆವೆಂದು ಭಾವಿಸಿಕೊಳ್ಳುವ ಮಕ್ಕಳಂತೆ ಆಡಿದ್ದಾರೆ ! . . . ನಿನ್ನ ಕಣ್ಣುಗಳನ್ನು ಕುರಿತು ನೋಡಿದಾಗ, ಅವರ ಮುಖದ ಮಾತುಗಳೆಲ್ಲ ಅವರ ತುಟಿಗಳ ಮೇಲೆ ಒಣಗಿಹೋಗಿರಬೇಕು . . . ನೀನು ಉತ್ತರ ಹೇಳಬೇಕಾದ ಅಗತ್ಯವೇ ಇರಲಿಲ್ಲ—ಸುಮ್ಮನೆ ಅವರ ಕಡೆಗೆ ದೃಷ್ಟಿಸಿರುವೆ ಅಷ್ಟೇ . . . ಆ ಮತ್ತೆ, ಅವರಿಗೂ ನಿನಗೂ ನಡುವೆ, ಅವರ ಭಾವನೆಗಳಿಗೂ ನಿನ್ನದಕ್ಕೂ ಮಧ್ಯೆ, ಒಂದು ಸರೋವರ, ಬದುಕು ಪ್ರೀತಿಗಳ ಒಂದು ಅಪಾರವಾದ ಸಮುದ್ರ, ಉದ್ಭವಿಸಿರಬೇಕು . . . ಆದರೆ ನೋಡು, ಇಲ್ಲೊಬ್ಬನು ಇದ್ದಾನೆ, ಅವನನ್ನು ತಂದೆಯೆಂದು ಕರೆಯುತ್ತೇನೆ . . . ಅವನು ತಲೆ ತಗ್ಗಿಸುತ್ತಾನೆ ; ಅವನ ಬಿಳಿಯ ಕೂದಲು ಅದನ್ನು ಮರೆಸುತ್ತದೆ . . . ಅವನನ್ನು ನಾವು ಕ್ಷಮಿಸಬೇಕು ; ಪಾಪ, ಮುದುಕ, ಕಣ್ಣು ಕಾಣದು. ನಮಗೆ ಕರುಣೆಯಿರಬೇಕು ; ನಾವು ಮಹಾ ಪ್ರಯತ್ನ ಮಾಡಬೇಕು ; ನಿನ್ನ ಕಣ್ಣುಗಳು ಅವನಿಗೆ ಏನೂ ಹೇಳುವುದಿಲ್ಲ—ಅವನು ನಮ್ಮಿಂದ ಅಷ್ಟು ದೂರ ಇದ್ದಾನೆ ; ಬೆಣಚುಕಲ್ಲಿನ ಮೇಲೆ ಬೀಳುವ ವರ್ಷಾಕಾಲದ ಮಳೆಯಂತೆ ನಮ್ಮ ಪ್ರೇಮ ಅವನ ಮುಪ್ಪಿನ ಮೇಲೆ ಏನೂ ಪರಿಣಾಮ ಬೀರಿಲ್ಲ . . . ನಮ್ಮ ಪ್ರೇಮವೆಂದರೆ ಅವನಿಗೆ ಏನೂ ಅರ್ಥವಿಲ್ಲದ್ದು ; ಅದರ ಹುರುಳು ಅವನಿಗೆ ತಿಳಿದಿಲ್ಲ . . . ಪ್ರೇಮವೆಂಬ ಪದದ ಅರ್ಥ ತಿಳಿಯದವರು ಪ್ರೀತಿಸುವಂತೆ ನಾವು ಪ್ರೀತಿಸುತ್ತಿರುವೆವೆಂದು ತಿಳಿದುಕೊಂಡಿದ್ದಾನೆ . . . ಅವನಿಗೆ ಅರ್ಥವಾಗದು, ಮಾತಿನ ಮೂಲಕವೇ ಹೇಳಬೇಕು . . . ಮಾತನಾಡು ; ಅವನಿಗೆ ನಿನ್ನ ಉತ್ತರವನ್ನು ತಿಳಿಸು.

**ವನ್ನ** : (ಮಾರ್ಕೋನನ್ನು ಸಮೀಪಿಸಿ,) ತಂದೆಯೇ, ನಾನು ಈ ರಾತ್ರಿ ಹೋಗುತ್ತೇನೆ.

**ಮಾರ್ಕೊ :** (ಅವಳ ಹಣೆಗೆ ಮುತ್ತಿಟ್ಟು,) ಗೊತ್ತು, ಮಗಳೆ . . .

**ಗ್ವೀಡೊ :** ಏನೆಂದೆ! ಏನು ಹೇಳುವೆ?

**ವನ್ನ** : ಗ್ವೀಡೊ, ನಾನು ಹೋಗುತ್ತೇನೆ. ನಾನು ಹೋಗಿಯೇ ತೀರಬೇಕು ; ಆಜ್ಞೆಯನ್ನು ಮೀರಲಾಗದು . . .

**ಗ್ವೀಡೊ :** ಆಜ್ಞೆ? ಯಾರ ಆಜ್ಞೆ ? ಹೇಳು!

**ವನ್ನ** : ಪ್ರಿನ್ಸಿವಲ್ಲೆಯ ಗುಡಾರಕ್ಕೆ ನಾನು ಈ ರಾತ್ರಿ ಹೋಗುತ್ತೇನೆ . . .

**ಗ್ವೀಡೊ :** ಅವನೊಡನೆ ಸಾಯುವುದಕ್ಕೆ, ಅವನನ್ನು ಕೊಲ್ಲುವುದಕ್ಕೆ? ಅದು ನನಗೆ ತೋಚಿರಲಿಲ್ಲ. ಸರಿ, ಸರಿ, ಅರ್ಥವಾಯಿತು!

**ವನ್ನ** : ಅವನನ್ನು ನಾನು ಕೊಂದರೆ, ನಮ್ಮ ನಗರದ ರಕ್ಷಣೆಯಾಗಲಿಲ್ಲ . . .

**ಗ್ವೀಡೊ :** ಏನೆಂದೆ! ನೀನು, ನಿನಗೆ ಅವನಲ್ಲಿ ಅನುರಾಗವೆ, ಹಾಗಾದರೆ! ಎಂದಿನಿಂದ ಈ ಪ್ರೇಮ?

**ವನ್ನ** : ಅವನನ್ನು ನಾನು ಕಾಣೆ; ಅವನನ್ನು ಎಂದೂ ಕಂಡದ್ದೊ ಇಲ್ಲ . . .

**ಗ್ವೀಡೊ :** ಆದರೆ, ಕೇಳಿದ್ದೀಯೆ. ಹೌದು, ಹೌದು, ಕೇಳಿದ್ದೀಯೆ, ಜನ ನಿನಗೆ ಹೇಳಿದ್ದಾರೆ . . .

**ವನ್ನ** : ಏನಿಲ್ಲ, ಅವನು ತುಂಬ ಮುದುಕನೆಂದು ಈಗತಾನೆ ಯಾರೋ ಹೇಳಿದರು . . .

**ಗ್ವೀಡೊ :** ಖಂಡಿತ ಅಲ್ಲ! ಅವನು ಯುವಕ, ರೂಪವಂತ, ನನಗಿಂತ ಚಿಕ್ಕ ಪ್ರಾಯ. ದೇವರೆ! ಇನ್ನೇನನ್ನಾದರೂ ಅವನು ಕೇಳಿದ್ದಿದ್ದರೆ, ನಮ್ಮ ನಗರವನ್ನು ಉಳಿಸುವುದಕ್ಕಾಗಿ ತೆವಳಿ ಅಂಬೆಗಾಲಿಡುತ್ತ ಅವನ ಬಳಿಗೆ ಇಷ್ಟಪಟ್ಟು ಹೋಗುತ್ತಿದ್ದೆ! ಇಲ್ಲವೆ, ಇವಳೊಡನೆ ದೇಶಾಂತರ ಹೋಗಿ, ಯಾರಿಗೂ ಗುರುತಾಗದೆ, ಯಾರ ಸ್ಮರಣೆಗೂ ಬಾರದೆ, ಬೀದಿಯ ಚವುಕಗಳಲ್ಲಿ ಭಿಕ್ಷೆ ಬೇಡುತ್ತ, ನಮ್ಮ ಆಯುಸ್ಸಿನ ಅವಶೇಷವನ್ನು ಕಳೆಯುತ್ತಿದ್ದೆವು . . . ಆದರೆ,

ಇದು, ಇದೋ! ಜಯಶೀಲನಾದವನು ಇಂಥ ಸಾಹಸಕ್ಕೆ ಮನಸ್ಸು ಮಾಡಿದ್ದು ಜಗತ್ತಿನ ಚರಿತ್ರೆಯಲ್ಲಿಯೇ ಇಲ್ಲ—(ವನ್ನಳ ಬಳಿ ಸಾರಿ, ತೋಳುಗಳಲ್ಲಿ ಅವಳನ್ನು ಬಾಚಿಕೊಂಡು,) ಆಃ, ವನ್ನ, ನನ್ನ ವನ್ನ, ಇದನ್ನು ನಾನು ನಂಬಲಾರೆ! ನಾನು ಕೇಳಿದ್ದು ನಿನ್ನ ಧ್ವನಿಯನ್ನಲ್ಲ, ಅದು ನನ್ನ ತಂದೆಯದು, ಅವನೊಬ್ಬ ನದೇ! ಇಲ್ಲ, ನಾನು ಏನನ್ನೂ ಕೇಳಿಲ್ಲ, ಎಲ್ಲವೂ ಇದ್ದಂತೆಯೇ ಇದೆ . . . ನಾನು ತಿಳಿದಿರುವುದು ತಪ್ಪೆಂದು ಹೇಳು : ಹೀಗೆ ಮಾತನಾಡಬೇಕಾದ್ದಕ್ಕಾಗಿ ನಿನ್ನ ಪ್ರೀತಿ, ನಿನ್ನ ಮನೋವಾಕ್ಕಾಯ ಸರ್ವಸ್ವವೂ ಸಂಕೋಚಪಟ್ಟು "ಅಲ್ಲ! ಅಲ್ಲ!" ಎಂದು ಕೂಗಿಡುವುದೆಂದು ಹೇಳು . . . ನಾನು ಏನನ್ನೂ ಕೇಳಿದ್ದಿಲ್ಲ, ಏನನ್ನೂ ಕೇಳಿಲ್ಲ ಎನ್ನುತ್ತಿದ್ದೇನೆ ; ಮೌನದ ಮುದ್ರೆ ಮುರಿದಿಲ್ಲ . . . ಆದರೆ, ನೋಡು, ಈಗ ನೀನು ಮಾತನಾಡಲೇಬೇಕು . . . ಎಲ್ಲರೂ ಕಿವಿ ಕೊಟ್ಟಿದ್ದಾರೆ . . . ಯಾರಿಗೂ ಕೇಳಿಸಿಲ್ಲ . . . ನೀನು ಹೇಳಲೇಬೇಕಾದು ದನ್ನು ಕೇಳಲು ಎಲ್ಲರೂ ನಿರೀಕ್ಷಿಸುತ್ತಿದ್ದಾರೆ . . . ಅದನ್ನು ಬೇಗ ಹೇಳಿಬಿಡು, ವನ್ನ, ನಿನ್ನ ಮನೋಗತ ಅವರಿಗೆ ಗೊತ್ತಾಗಲಿ! ಶೀಘ್ರವಾಗಿ! ನಮ್ಮ ಪರಸ್ಪರ ಪ್ರೇಮವನ್ನು ಸಾರಿಹೇಳು, ಅವರ ಕನಸನ್ನು ಚೆದರಿಸಿ ಕಳೆ . . . ನಾನು ನಿರೀಕ್ಷಿಸುತ್ತಿರುವ ಆ ಮಾತನ್ನು ಹೇಳು, ಎಲ್ಲ ವಸ್ತುಗಳೂ ನನ್ನ ಸುತ್ತ ಪುಡಿಪುಡಿಯಾಗಿ ಪಾಳುಬೀಳದಿರಬೇಕಾದರೆ ಯಾವ ಮಾತನ್ನು ಹೇಳಬೇಕೋ ಆ ಮಾತನ್ನು ಹೇಳು! . . .

**ವನ್ನ** : ಓ ಗ್ವೀಡೊ, ಸಹಿಸಿಕೊಳ್ಳುವುದು ಎಷ್ಟು ಕಷ್ಟ ಎಂದು ನಾನು ಬಲ್ಲೆ . . .

**ಗ್ವೀಡೊ** : (ಏನೋ ತೋಚಿ, ಅವಳನ್ನು ದೂರಕ್ಕೆ ತಳ್ಳಿ,) ಎಷ್ಟು ಕಷ್ಟ ವಿರಬೇಕು! ನೀನು ಬಲ್ಲೆ, ನೀನು ಬಲ್ಲೆಯ? ನಾನಲ್ಲವೆ ಇದನ್ನೆಲ್ಲ ಸಹಿಸ ಬೇಕಾದವನು, ನಿನ್ನನ್ನು ಪ್ರೀತಿಸಿದ ನಾನಲ್ಲವೆ? ನೀನು ಎಂದೂ ನನ್ನನ್ನು ಪ್ರೀತಿಸಿರಲಿಲ್ಲ. ಇಲ್ಲ, ಈಗ ಗೋಚರವಾಗುತ್ತಿದೆ! ಇದಕ್ಕೆ ಅರ್ಥ ಏನೆಂದು ಕೊಳ್ಳಬೇಕು? ನನ್ನನ್ನು ತೊರೆದುಹೋಗುವುದು ನಿನಗೆ ಸಂತೋಷ ; ನೀನು ಇವನನ್ನು ಪ್ರೀತಿಸುವೆಯೋ ಏನೋ ಯಾರು ಬಲ್ಲರು! ಆಃ, ಆದರೂ, ಇಲ್ಲಿ ಇನ್ನೂ ನಾನೆ ಯಜಮಾನ, ಅವರು ಏನಾದರೂ ಹೇಳಿಕೊಳ್ಳಲಿ! . . . ನಾನು ತೆಪ್ಪನೆ ಪಕ್ಕದಲ್ಲಿ ನಿಂತು ಇದೆಲ್ಲಕ್ಕೂ ಅವಕಾಶ ಕೊಡುವೆನೆಂದುಕೊಂಡಿರುವೆ

ಯೇನು? ಈ ಕೋಣೆಯ ಕೆಳಗಡೆ ಒಂದು ನೆಲಮಾಳಿಗೆಯಿದೆ, ಅಲ್ಲಿ ಕತ್ತಲೆ, ಅಲ್ಲಿ ಕೊರೆತ; ಅಲ್ಲಿ ನಿಲ್ಲುವೆಯಂತೆ, ನನ್ನ ಸ್ಟ್ರಾಡಿಯೋಟಿ ದಳದವರ ಕಾವಲಿನಲ್ಲಿ, ನಿನ್ನ ಈ ಪ್ರತಾಪ ಆರುವವರೆಗೆ, ನಿನ್ನ ಕರ್ತವ್ಯ ಏನೆಂಬುದನ್ನು ನೀನು ತಿಳಿಯುವವರೆಗೆ . . . ಕೊಂಡುಹೋಗಿ, ಇವಳನ್ನು! . . . ಹೇಳಿ ಯಾಯಿತು; ಇದು ನನ್ನ ಆಜ್ಞೆ! ಹೋಗಿರಿ, ನಡೆಸಿರಿ!

**ವನ್ನ :** ಗ್ವೀಡೊ, ಗ್ವೀಡೊ, ನಾನು ನಿನಗೆ ಹೇಳಬೇಕಾದ ಅಗತ್ಯ ವಾದರೂ ಖಂಡಿತವಾಗಿ ಇಲ್ಲವಲ್ಲ . . .

**ಗ್ವೀಡೊ :** ಆಜ್ಞೆಯನ್ನು ನಡಸುವುದಿಲ್ಲವೆ! ನನ್ನ ಆಜ್ಞೆಯನ್ನು ಪಾಲಿಸುವವರು ಯಾರೂ ಇಲ್ಲ! ನೀನು, ಬೋರ್ಸೊ, ಟೊರೆಲ್ಲೋ, ನಿಮ್ಮ ತೋಳುಗಳು ಏನು ಕಲ್ಲಾದುವೆ? ನನ್ನ ಧ್ವನಿ ನಿಮಗೆ ಕೇಳಿಸುವುದಿಲ್ಲವೆ? . . . ನೀವು, ಕೆಳಗೆ ನಿಂತಿರುವವರು, ನೀವು ಇತರರು, ಅಲ್ಲಿ ನಿಂತು ಕೇಳುವ ವರು, ನಿಮಗೆ ಕಿವಿ ಕೇಳಿಸುವುದಿಲ್ಲವೆ? ಎಷ್ಟು ಕಿರಿಚಿದರೂ, ಕದಲುವುದೇ ಇಲ್ಲ ವಲ್ಲ . . . ಇವಳನ್ನು ಸೆಳೆದೊಯ್ಯಿರಿ, ಎಂದೆ! ಕೊಂಡುಹೋಗಿ, ಕೊಂಡು ಹೋಗಿ! . . . ಆಃ, ತಿಳಿಯಿತು! ಇವರಿಗೆಲ್ಲ ಭೀತಿ; ತಾವು ಬದುಕಬೇಕು, ಬದುಕಬೇಕು—ಇವರಿಗೆ ಬೇಕಾದದ್ದು ಅಷ್ಟೇ! ಇವರು ಬದುಕಲಾಗುವಂತೆ ನಾನು ಸಾಯಬೇಕು; ಆದರೆ ಈ ಮಾರ್ಗದಿಂದಲ್ಲ! . . . ಆಗಲಾರದು, ಖಂಡಿತ ವಾಗಿ ಅದು ಅತ್ಯಂತ ಸುಲಭ . . . ಇಲ್ಲಿ ನಾನೊಬ್ಬ, ಒಂಟಿಯಾಗಿ, ಈ ಜನರ ಗುಂಪಿನ ಎದುರು; ಇದಕ್ಕೆ ನಾನು ಆಹುತಿಯಾಗಬೇಕೇ . . . ನಾನೇ ಏಕೆ, ನೀವು ಏಕಾಗಬಾರದು! ನಿಮಗೂ ಎಲ್ಲರಿಗೂ ಹೆಂಡಿರುಂಟು! . . . (ತನ್ನ ಕತ್ತಿ ಯನ್ನು ಅರ್ಧ ಎಳೆದು, ವನ್ನಳನ್ನು ಸಮೀಪಿಸಿ,) ಅಪಮಾನಕ್ಕೆ ಬದಲಾಗಿ ಸಾವನ್ನೇ ನಾನು ಮೆಚ್ಚಿಕೊಂಡರೆ? . . . ಅದು ನಿನಗೆ ತೋಚಿರಲಿಲ್ಲ! . . . ನೋಡಿದೋ, ನಾನು ಕೈ ಎತ್ತಿದರೆ ಸಾಕು—

**ವನ್ನ :** ನಿನ್ನ ಪ್ರೀತಿ ನಿನಗೆ ಹಾಗೆ ವಿಧಿಸಿದರೆ, ಗ್ವೀಡೊ . . .

**ಗ್ವೀಡೊ :** "ನಿನ್ನ ಪ್ರೀತಿ ನಿನಗೆ ಹಾಗೆ ವಿಧಿಸಿದರೆ"! ಆಃ, ಹೌದು, ಪ್ರೀತಿಯನ್ನು ಕುರಿತು ಮಾತಾಡು, ಪ್ರೀತಿಯೆಂಬುದರ ಅರ್ಥವನ್ನು ಎಂದೂ ಅರಿಯದ ನೀನು! ನೀನು, ನಿನ್ನ ಅಂತರಂಗದಲ್ಲಿ ಪ್ರೀತಿಯೆಂಬುದು ಎಂದಿಗೂ ಇದ್ದಿರಲಾರದು! ಈಗ ನಿನ್ನನ್ನು ನೋಡಿದಂತೆಲ್ಲ ನಾನು ಕಾಣುವುದು ಒಂದು

ಮರುಭೂಮಿಯನ್ನು—ಸರ್ವವನ್ನೂ ನುಂಗಿ, ಒಣಗಿ, ಸಾಯುತ್ತ . . . ಒಂದು ಕಣ್ಣೀರಿನ ಹನಿ, ಒಂದಾದರೂ ಕಣ್ಣೀರಿನ ಹನಿ ಇಲ್ಲದ ಮರುಭೂಮಿಯನ್ನು ! . . . ನಾನು ಏನಾಗಿದ್ದೆ, ನಿನ್ನ ಭಾಗಕ್ಕೆ ನಾನು ಏನಾಗಿದ್ದೆ ? ನನ್ನ ತೋಳು ನಿನಗೆ ಆಶ್ರಯಕೊಟ್ಟಿದ್ದ ಮನುಷ್ಯನಾಗಿದ್ದೆ ಅಷ್ಟೆ! . . . ಒಂದು ಕ್ಷಣ ಮಾತ್ರವಾದರೂ ನೀನು . . .

**ವನ್ನ** : ಗ್ವೀಡೊ, ನನ್ನ ಕಡೆ ನೋಡು, ನೋಡು ನನ್ನ ಕಡೆ! ನನ್ನನ್ನು ಕಾಣಲಾರೆಯಾ ? ನಿನಗೆ ಏನು ಹೇಳಲಿ, ಗ್ವೀಡೊ ? ನನ್ನ ಅಂತರಂಗವನ್ನು ನಿನಗೆ ತಿಳಿಸಲು ತಕ್ಕ ಮಾತುಗಳುಂಟೆ ? ಒಂದೇ ಒಂದು ಮಾತನ್ನಾಡಿದರೂ ಸಾಕು, ನನ್ನ ಶಕ್ತಿಯೆಲ್ಲ ಉಡುಗಿಹೋಗುತ್ತದೆ! . . . ನನ್ನ ಕೈಲಾಗದು . . . ನನಗೆ ನಿನ್ನಲ್ಲಿ ಪ್ರೀತಿ, ನನ್ನ ಸರ್ವಸ್ವವೂ ನಿನ್ನಿಂದಲೇ . . . ಆದರೂ ನಾನು ಹೋಗುತ್ತೇನೆ, ಹೋಗಬೇಕು, ಹೋಗಲೇಬೇಕು . . .

**ಗ್ವೀಡೊ** : (ಅವಳನ್ನು ತನ್ನಿಂದ ದೂರತಳ್ಳಿ,) ಒಳ್ಳೆಯದು ! ಹೋಗು ; ತೊಲಗಿಹೋಗು! ಅವನಲ್ಲಿಗೆ ಹೋಗು, ನಾನು ನಿನ್ನನ್ನು ತೊರೆದಿದ್ದೇನೆ. ಹೋಗು! ಇನ್ನು ನೀನು ನನ್ನವಳಲ್ಲ . . . .

**ವನ್ನ** : (ಅವನ ಕೈಗಳನ್ನು ಗಟ್ಟಿಯಾಗಿ ಹಿಡಿದು,) ಗ್ವೀಡೊ ! . . .

**ಗ್ವೀಡೊ** : (ಅವಳನ್ನು ದೂರಕ್ಕೆ ನೂಕುತ್ತ,) ಆಃ, ಆ ಹಿತವಾದ ಮೃದುವಾದ ಹಸ್ತಗಳಿಂದ ನನ್ನನ್ನು ಮುಟ್ಟಿ ಹಿಡಿಯಬೇಡ . . . ನನ್ನ ತಂದೆ ಹೇಳಿದ್ದು ಸರಿ; ನಿನ್ನನ್ನು ನನಗಿಂತ ಅವನು ಚೆನ್ನಾಗಿ ಬಲ್ಲ . . . ಅಪ್ಪ, ಇದ್ದೋ ಇಲ್ಲಿದ್ದಾಳೆ. ಇದು ನಿನ್ನ ಕೆಲಸ, ಇದನ್ನು ಈಗ ಕೊನೆಮುಟ್ಟ ಮುಗಿಸಿಬಿಡು . . . ಇವಳನ್ನು ಅವನ ಗೂಡಾರಕ್ಕೆ ನಡಸಿಕೊಂಡು ಹೋಗು. ನಾನು ಇಲ್ಲಿಯೇ ನಿಂತು, ನೀವಿಬ್ಬರೂ ಜೊತೆಯಲ್ಲಿ ಹೋಗುವುದನ್ನು ನೋಡುತ್ತಿರುತ್ತೇನೆ . . . ಆದರೆ, ಅವಳು ಕೊಂಡುಕೊಡುವ ರೊಟ್ಟಿಯಲ್ಲೂ ಮಾಂಸದಲ್ಲೂ ನಾನು ಪಾಲುಕೊಳ್ಳುವೆನೆಂದು ಮಾತ್ರ ಎಂದುಕೊಳ್ಳಬೇಡಿ . . . ಇನ್ನು ನನಗೆ ಉಳಿದಿರುವುದು ಒಂದು; ಅದೇನೆಂಬುದು ಇಷ್ಟರಲ್ಲಿಯೇ ನಿಮಗೆ ಗೊತ್ತಾಗುತ್ತದೆ . . .

**ವನ್ನ**: (ಅವನಿಗೆ ಅಂಟಿಕೊಂಡು,) ಗ್ವೀಡೊ, ನನ್ನ ಕಡೆ ನೋಡು ; ವಿಮುಖನಾಗಬೇಡ—ಇದನ್ನು ಸಹಿಸುವುದು ದುಷ್ಕರ . . . ನಿನ್ನ ಕಣ್ಣುಗಳನ್ನು ನೋಡೋಣ, ಗ್ವೀಡೋ . . .

**ಗ್ವೀಡೊ :** ನೋಡು ಹಾಗಾದರೆ! ನನ್ನ ಕಣ್ಣುಗಳನ್ನು ನೋಡು, ನೋಡಿ ಓದು . . . ಹೋಗಾಚೆ, ನೀನು ಯಾರೋ ನಾನಿನ್ನು ಕಾಣೆ! ವೇಳೆ ಮೀರುತ್ತಿದೆ—ಅಲ್ಲಿ ಅವನು ಕಾಯುತ್ತಿದ್ದಾನೆ: ರಾತ್ರಿಯಾಗುತ್ತಿದೆ . . . ಹೋಗು! ಏನು ಹೆದರಿಕೆ ನಿನಗೆ? ನಾನೇನೂ ಆತ್ಮಹತ್ಯೆಮಾಡಿಕೊಳ್ಳುವುದಿಲ್ಲ. ನನಗೆ ಹುಚ್ಚು ಹಿಡಿದಿಲ್ಲ; ಬುದ್ಧಿಭ್ರಮಣೆಯಾಗುವುದು ಅನುರಾಗ ಸಿದ್ಧಿಸಿದ ಸಮಯದಲ್ಲೀ ಹೊರತು, ಅನುರಾಗ ನಾಶವಾದಾಗ ಅಲ್ಲ . . . ಪ್ರೇಮದ, ಪ್ರೇಮ ಪಾತಿವ್ರತ್ಯಗಳ ಪರಮಾವಧಿಯನ್ನು ಕುರಿತು ದೃಷ್ಟಿಸಿದ್ದೇನೆ . . . ಇನ್ನು ಹೇಳಬೇಕಾದ್ದು ಏನೂ ಇಲ್ಲ. .ಬಿಡು, ಬಿಡು, ಬೆರಳುಗಳ ಈ ಬಿಗಿತ ಬೇಡ; ಮರೆಯಾಗುತ್ತಿರುವ ಪ್ರೇಮವನ್ನು ಅವು ಹಿಡಿದು ನಿಲ್ಲಿಸಲಾರವು. ಎಲ್ಲ ಮುಗಿಯಿತು, ತೀರಿತು, ಕೊನೆಯಾಯಿತು; ಒಂದು ಚಿಹ್ನೆಯೂ ಇಲ್ಲದಂತೆ ಎಲ್ಲವೂ ನಿರ್ನಾಮವಾಯಿತು! . . . ಹಿಂದಿನದು ಮುಳುಗಿಹೋಯಿತು, ಅದ ರೊಂದಿಗೆ ಮುಂದಿನದು ಕೂಡ . . . ಆಃ, ಹೌದು, ಆ ಶುದ್ಧವಾದ ಸ್ವಚ್ಛವಾದ ಬೆರಳುಗಳು, ಆ ಉದಾತ್ತವಾದ ನೇತ್ರಗಳು, ಆ ತುಟಿಗಳು; ನಾನು ಕೂಡ ಒಂದು ಕಾಲಕ್ಕೆ ನಂಬಿಕೊಂಡಿದ್ದೆ . . . ಈಗ ಏನೇನೂ ಉಳಿದಿಲ್ಲ . . . (ಎಂದು ವನ್ನಳ ಕೈಗಳನ್ನು ಆಚೆಗೆ ಒದರಿ,) ಏನೂ ಇಲ್ಲ, ಯಾವುದೂ ಇಲ್ಲ, ಇಲ್ಲವೇ ಇಲ್ಲ! ಹೋಗಿಬಾ, ವನ್ನ! ಹೋಗು ಬೇಗ. ಹೋಗಿಬಾ . . . ಅಲ್ಲಿಗೆ ಹೋಗುವೆ ತಾನೆ? . . .

**ವನ್ನ :** ಹೌದು . . .

**ಗ್ವೀಡೊ :** ಹಿಂದಿರುಗಿ ಬರುವುದಿಲ್ಲವಷ್ಟೆ? . . .

**ವನ್ನ :** ಬರುವೆ, ಹಿಂದಿರುಗಿ ಬರುವೆ . . .

**ಗ್ವೀಡೊ :** ಅದು ಇರಲಿ, ನೋಡೋಣ . . . ಆಃ, ನೋಡೋಣ . . . ಇವಳ ಮನಸ್ಸನ್ನು ನನಗಿಂತ ನನ್ನ ತಂದೆ ಚೆನ್ನಾಗಿ ತಿಳಿದಿದ್ದನೆಂದು ಯಾರು ಹೇಳುವುದು ಸಾಧ್ಯವಿತ್ತು . . .

[ಅವನು ತೂರಾಡುತ್ತ, ಅಮೃತಶಿಲೆಯ ಕಂಬವೊಂದನ್ನು ಒರಗಿ ನಿಲ್ಲುವನು. ವನ್ನ ನಿಧಾನವಾಗಿ, ಒಂಟಿಯಾಗಿ, ಮತ್ತೆ ಅವನ ಕಡೆ ಕಣ್ ತಿರುಗಿಸದೆ ತೆರಳುವಳು.

## ಎರಡನೆಯ ಅಂಕ

ಪ್ರಿನ್‌ಸಿವಲ್ಲೆಯ ಗುಡಾರ.

ಯಥೇಚ್ಛವಾದ ಅವ್ಯವಸ್ಥೆ. ರೇಷ್ಮೆಯ ಕಲಾಪತ್ತಿನ ತೆರೆಗಳು. ಶಸ್ತ್ರಾಸ್ತ್ರಗಳು, ಅನರ್ಘ್ಯವಾದ ಚರ್ಮಾಂಬರಗಳು ಸುತ್ತಲೂ ಚೆಲ್ಲಿವೆ. ಅರ್ಧ ತೆರೆದುಬಿದ್ದ ದೊಡ್ಡ ಪೆಠಾರಿಗಳಲ್ಲಿ ರಾಶಿರಾಶಿ ಆಭರಣಗಳೂ ಥಳಥಳಿಸುವ ವಸ್ತುಗಳೂ ಪ್ರಕಟವಾಗಿದೆ. ಗುಡಾರಕ್ಕೆ ಪ್ರವೇಶಿಸಬೇಕಾದರೆ ಹಿಂದುಗಡೆಯಿಂದ, ಭಾರವಾದ ತೆರೆಯ ಮೂಲಕ. ಪ್ರಿನ್‌ಸಿವಲ್ಲೆ, ಒಂದು ಮೇಜಿನ ಬಳಿ ನಿಂತು, ಕಾಗದಪತ್ರಗಳು, ನಕಾಶೆಗಳು, ಆಯುಧಗಳು ಇವನ್ನು ಸವರಿಸುತ್ತಿದ್ದಾನೆ. ಪ್ರವೇಶ—ವೀಡಿಯೊ.

**ವೀಡಿಯೊ :** ಇದೋ, ಪ್ರಜಾರಾಜ್ಯದ ನಿಯೋಗಿಯಿಂದ ಕಾಗದ.

**ಪ್ರಿನ್‌ಸಿವಲ್ಲೆ :** ಟ್ರೈವಲ್ಸಿಯೊ ಕಳಿಸಿದ್ದೆ ?

**ವೀಡಿಯೊ :** ಹೌದು. ಎರಡನೆಯ ನಿಯೋಗಿಯಾದ ಮಾನ್ಯ ಮಾಲಡ್ಯೂರ ಇನ್ನೂ ಹಿಂದಿರುಗಿ ಬಂದಿಲ್ಲ.

**ಪ್ರಿನ್‌ಸಿವಲ್ಲೆ :** ಕ್ಯಾಸೆಂಟ್ಯೈನಿನ ದಿಕ್ಕಿನಿಂದ ಫ್ಲಾರೆನ್ಸನ್ನು ಹೆದರಿಸುವವೆನಿಸಿನ ಸೇನೆಯು ಬಹುಶಃ ಅನಿರೀಕ್ಷಿತವಾದ ಪ್ರತಿಭಟನೆಯನ್ನು ತೋರುತ್ತಿರಬಹುದು. ಕಾಗದ ಕೊಡು ಇಲ್ಲಿ. (ಅದನ್ನು ತೆಗೆದುಕೊಂಡು ಓದುವನು.) ಕಟ್ಟಪ್ಪಣೆ ಮಾಡಿದ್ದಾನೆ, ಕೊನೆಯ ಎಚ್ಚರಿಕೆ ಕಳಿಸಿದ್ದಾನೆ. ನಾಳೆ ಬೆಳಗಿನ ಜಾವದ ಹೊತ್ತಿಗೆ ಥಾಳಿ ನಡೆಸದಿದ್ದರೆ, ನನ್ನನ್ನು ಕೂಡಲೆ ಸೆರೆಹಿಡಿಯುತ್ತಾರಂತೆ . . . ಒಳ್ಳೆಯದು. ಈ ರಾತ್ರೆ ಆದರೂ ನನ್ನದಾಗಿರುವುದಲ್ಲ . . . ಕೂಡಲೆ ಸೆರೆಹಿಡಿಯುವರಲ್ಲವೆ! . . . ಆಃ, ಅವರೇನು ಕಂಡರು! . . . ತನ್ನ ಬದುಕಿನ ಒಂದು ನಿರುಪಮವಾದ ಗಳಿಗೆಯನ್ನು ಎದುರುನೋಡುತ್ತಿರುವವನು ಈಇಂಥ ಹಳಸಿದ ಗೊಡ್ಡುಮಾತುಗಳಿಗೆ ಭೀತಿಗೊಳ್ಳುವನೆಂದು ನಿಜವಾಗಿಯೂ ಇವರು ಎಣಿಸುತ್ತಾರೆಯೆ! . . . ಬೆದರಿಕೆ, ಕೈಸೆರೆ, ಅಪವಾದ, ವಿಚಾರಣೆ, ತೀರ್ಪು—ಇವುಗಳಿಂದ ನನಗೇನು? . . . ಅವರ ಕೈಲಾಗಿದ್ದಿದ್ದರೆ, ಅವರಿಗೆ ಧೈರ್ಯವಿದ್ದಿದ್ದರೆ, ಎಂದೋ ನನ್ನನ್ನು ಹಿಡಿದು ಬಂಧಿಸುತ್ತಿದ್ದರು . . .

**ವೀಡಿಯೊ:** ಈ ಕಾಗದ ಕೊಡುತ್ತ, ಮಾನ್ಯ ಟ್ರ್ರೈವಲ್ಸಿಯೊ ಹೇಳಿದನು, ತಾನೂ ಹಿಂದೆಯೇ ಬರುವೆನೆಂದು. ನಿನ್ನ ಸಂಗಡ ಅವನು ಮಾತನಾಡಬೇಕಂತೆ . . .

**ಪ್ರಿನ್ಸಿವಲ್ಲೆ :** ಆಃ, ಕಡೆಗೂ ಮನಸ್ಸು ಮಾಡಿದನಲ್ಲವೆ . . . ನಮ್ಮ ಭೇಟಿಯಾಗುವುದರಿಂದ ಅನೇಕ ವಿಷಯಗಳು ಇತ್ಯರ್ಥವಾಗುವುವು; ಈ ನರಪೇತಲನಾದ ಕುಳ್ಳ ಕರಣಿಕ, ಫ್ಲಾರೆನ್ಸಿನ ಗುಪ್ತವಾದ ಸಾಮರ್ಥ್ಯಕ್ಕೆ ಪ್ರತೀಕನಾದವನು, ಆದರೂ ನನ್ನನ್ನು ನಿಟ್ಟಿಸಿ ನೋಡಲು ಧೈರ್ಯವಿಲ್ಲದವನು; ಈ ಅಪಸ್ಮಾರದ ವಿವರ್ಣಮುಖದ ಕುಬ್ಜ, ನನ್ನನ್ನು ಕಂಡರೆ ಸಾವನ್ನು ಕಂಡುದಕ್ಕಿಂತ ಹೆಚ್ಚಾಗಿ ದ್ವೇಷಿಸುವವನು, ಈ ಒಂದು ಗಂಟೆಯನ್ನು ಹೇಗೆ ಕಳೆಯುವನೆಂಬುದನ್ನು ಕಾಣ . . . ಗುಹೆಯೊಳಗೆ ನುಗ್ಗಿ ನರರಾಕ್ಷಸನ ಗೊಡವೆಗೆ ಬರಬೇಕಾದರೆ, ಅತ್ಯಂತ ಗುರುತರವಾದ ಆಜ್ಞೆಗಳು ಅವನಲ್ಲಿಗೆ ಬಂದಿರಬೇಕು . . . ನನ್ನ ಬಾಗಿಲ ಬಳಿ ಕಾವಲುಗಾರರು ಯಾರು ?

**ವೀಡಿಯೊ :** ನಿನ್ನ ಗೆಲೀಸಿಯನ್ ದಳದ ಇಬ್ಬರು ನುರಿತ ಯೋಧರು. ಹರ್‌ನ್ಯಾಂಡೋವನ್ನು ಕಂಡ ಹಾಗಿತ್ತು, ಇನ್ನೊಬ್ಬ ಡಿಏಗೋ ಇರಬಹುದೆಂದು ಕಾಣುತ್ತದೆ.

**ಪ್ರಿನ್ಸಿವಲ್ಲೆ :** ಒಳ್ಳೆಯದು; ಸ್ವರ್ಗದಲ್ಲಿರುವ ಸಂತರುಗಳನ್ನೆಲ್ಲಾ ಸಂಕಲೆಗಳಿಂದ ಬಿಗಿದುಹಾಕಿರೆಂದು ನಾನು ಆಜ್ಞೆಮಾಡಿದರೆ, ಅದನ್ನೂ ಪರಿಪಾಲಿಸುತ್ತಾರೆ, ಆ ಇಬ್ಬರು . . . ಕತ್ತಲಾಗುತ್ತ ಬಂತು, ದೀಪವನ್ನು ಹಚ್ಚ ಹೇಳು. ಹೊತ್ತು ಎಷ್ಟಾಯಿತು ?

**ವೀಡಿಯೊ :** ಒಂಬತ್ತು ಮೀರಿತು.

**ಪ್ರಿನ್ಸಿವಲ್ಲೆ :** ಮಾರ್ಕೊ ಕೊಲೊನ್ನ ಇನ್ನೂ ಹಿಂದಿರುಗಿಬಂದಿಲ್ಲ ?

**ವೀಡಿಯೊ :** ಕಂದಕದ ಬಳಿಯ ಕಾವಲಿನವರು ಅವನು ಬಂದ ಒಡನೆಯೆ ನಿನ್ನಲ್ಲಿಗೆ ಕರೆತರುವರು.

**ಪ್ರಿನ್ಸಿವಲ್ಲೆ :** ನನ್ನ ಒಪ್ಪಂದವನ್ನು ನಿರಾಕರಿಸಿದ್ದರೆ, ಇದಕ್ಕೆ ಮೊದಲೇ ಅವನು ಬರಬೇಕಾಗಿತ್ತು . . . ಈ ಗಂಟೆಯಲ್ಲಿ ಇತ್ಯರ್ಥವಾಗುತ್ತದೆ ; ಸೆರೆಯಾಳುಗಳು ತಮ್ಮ ಸುತ್ತಿನ ಕಗ್ಗತ್ತಲೆಯನ್ನು ಕುರಿತು ದೃಷ್ಟಿಸಿ, ಗಾಳಿ ತುಂಬಿದ ಪಟಗಳುಳ್ಳ ದೊಡ್ಡ ಹಡಗುಗಳನ್ನು ಕನಸುಕಾಣುವ ಹಾಗೆ, ನನ್ನ

ಬದುಕೆಲ್ಲವೂ ಈ ಗಳಿಗೆಯಲ್ಲಿ ಅಡಕವಾಗಿದೆ . . . ಪುರುಷನಾದವನು ತನ್ನ ಗತಿ, ತನ್ನ ಮತಿ, ತನ್ನ ಪ್ರಾಣ, ತನ್ನ ಸುಖ, ತನ್ನ ದುಃಖ ಎಲ್ಲವನ್ನೂ ಹೆಂಗಸಿನ ಅನುರಾಗವೆಂಬ ಅಬಲಪದಾರ್ಥಕ್ಕೆ ವಶಪಡಿಸುತ್ತಿರುವುದು, ಇದು ವಿಚಿತ್ರ ! . . . ಇದನ್ನು ಕಂಡು ನನಗೇ ನಗು ಬಂದೀತು, ಆದರೆ ಇದು ಆ ನಗುವಿಗಿಂತ ಬಲವತ್ತರವಾದದ್ದು . . . ಮಾರ್ಕೊ ಹಿಂದಿರುಗಲಿಲ್ಲ . . . ಆದ್ದರಿಂದ, ಅವಳು ಬರುತ್ತಾಳೆ . . . ನಡೆ, ಅವಳ ಸಮ್ಮತಿಯನ್ನು ಘೋಷಿಸುವ ಪಂಜು ಕಾಣಿಸುವುದೆ, ನೋಡು . . . ಇತರರು ಬದುಕಿಕೊಳ್ಳಲಿ ಎಂಬುದಕ್ಕೋಸ್ಕರವಾಗಿ ತನ್ನನ್ನು ಅರ್ಪಿಸಿಕೊಂಡು, ಆ ಇತರರನ್ನು ಬದುಕಿಸುವಾಗಲೇ ನನ್ನನ್ನೂ ಬದುಕಿಸುವ ಆ ಹೆಂಗಸಿನ ನಡುಕುಹಜ್ಜೆಗಳನ್ನು ಮುನ್ಸೂಚಿಸುವ ಬೆಳಕು ಕಾಣುವುದೆ, ನೋಡು . . . ಬೇಡ, ನಿಲ್ಲು—ನಾನೇ ಹೋಗುತ್ತೇನೆ. ಈ ಗಳಿಗೆಗೋಸ್ಕರವಾಗಿ ನನ್ನ ಬಾಲ್ಯದಿಂದಲೂ ಕಾದಿದ್ದೇನೆ, ಕಾದು ಹಂಬಲಿಸಿದ್ದೇನೆ ; ಆದ್ದರಿಂದ, ನನ್ನ ಕಣ್ಣುಗಳು ಹೊರತಾಗಿ, ಯಾವ ಸ್ನೇಹಿತನವು ಆದರೂ ಆಗಲಿ, ಬೇರೆ ಯಾವುವೂ ಅವಳ ಬರವಿಗೆ ಸ್ವಾಗತವನ್ನು ಬಯಸಬಾರದು . . . (ಗುಡಾರದ ದ್ವಾರಕ್ಕೆ ಹೋಗಿ, ತೆರೆಯನ್ನು ಹಿಂದಕ್ಕೆ ಎಸೆದು, ಕತ್ತಲೆಯಾಚೆ ನೋಡುವನು.) ಆ ಬೆಳಕು ನೋಡಿದೆಯ, ವೀಡಿಯೊ, ಆ ಬೆಳಕು ! ಕತ್ತಲೆಯಲ್ಲಿ ಅದು ಹೇಗೆ. ಬೆಳಗುತ್ತದೆ, ಹೇಗೆ ಜ್ವಲಿಸುತ್ತದೆ, ನೋಡು ! . . . ಒಳ್ಳೆಯದು, ಅದು ಹಾಗೇ ಇರಬೇಕು . . . ಮಬ್ಬುಮುಸುಕನ್ನು ಹೇಗೆ ತಿವಿಯುತ್ತಿದೆ ನೋಡು ! . . . ನಗರದ ಮೇಲೆ ಬೆಳಗುವುದು ಅದು ಒಂದೇ ಬೆಳಕು . . . ಆಃ, ಇಷ್ಟು ಅಮೋಘವಾದ ಪುಷ್ಪವನ್ನು ಪೀಸಾ ಇದುವರೆಗೆ ಎಂದೂ ಗಗನದ ಕಡೆಗೆ ಎತ್ತಿ ಹಿಡಿದದ್ದಿಲ್ಲ ; ಇದಕ್ಕಾಗಿ ಎಷ್ಟು ಕಾಲ ಕಾಯ್ದುದಾಯಿತು, ಎಷ್ಟು ಸ್ವಲ್ಪ ಆಶೆಯಿಂದ ಕಾಯ್ದುದಾಯಿತು ! . . . ಆಃ, ಭಾಪು, ಪೀಸಾದ ವೀರರೆ ! ನಿಮ್ಮ ದೇಶದ ಚರಿತ್ರೆಯಲ್ಲಿ ಚಿರಸ್ಮರಣೀಯವಾಗಿ ನಿಲ್ಲುವ ಹಬ್ಬವನ್ನು ಈ ರಾತ್ರೆ ನೀವು ನಡೆಸುವಿರಂತೆ ; ನಾನಾದರೋ ನನ್ನ ಜನ್ಮನಗರವನ್ನು ರಕ್ಷಿಸಿದುದಕ್ಕಿಂತ ಅಧಿಕವಾದ ದಿವ್ಯಾನಂದವನ್ನು ಅನುಭವಿಸುವೆನು . . .

**ವೀಡಿಯೊ :** (ಅವನ ತೋಳನ್ನು ಮುಟ್ಟಿ,) ಗುಡಾರಕ್ಕೆ ಹೋಗೋಣ. ಅದೋ, ಮಾನ್ಯ ಟ್ರೈವಲ್ಸಿಯೊ ಬರುತ್ತಿದ್ದಾನೆ.

**ಪ್ರಿನ್ಸಿವಲ್ಲೆ** : (ಹಿಂದಿರುಗಿ ಬಂದು, ತೆರೆಯನ್ನು ಇಳಿಬಿಟ್ಟು,) ಹೌದು. ನಾವು ಈಗಲೂ . . . ಭೇಟಿ ಬೇಗ ಮುಗಿಯುವುದು . . . (ಮೇಜಿನ ಹತ್ತಿರ ಹೋಗಿ, ಅಲ್ಲಿನ ಕಾಗದಗಳಲ್ಲಿ ಬೆರಳಾಡಿಸಿ,) ಅವನ ಮೂರು ಕಾಗದಗಳು ನಿನ್ನಲ್ಲಿ ಇವೆಯೊ ?

**ವೀಡಿಯೊ** : ಎರಡು ಮಾತ್ರ ಇವೆ.

**ಪ್ರಿನ್ಸಿವಲ್ಲೆ** : ನಾನು ನಡುವೆ ತಡೆಗಟ್ಟಿದವು ಎರಡು, ಮತ್ತು ಈ ಸಂಜೆ ಬಂದ ಆಜ್ಞೆ . . .

**ವೀಡಿಯೊ** : ಮೊದಲಿನ ಎರಡು ಇಲ್ಲಿವೆ. ಇನ್ನೊಂದನ್ನು ನಿನ್ನ ಕೈಯಲ್ಲಿ ಮುದುರಿ ಹಿಂಡುತ್ತಿದ್ದೀಯೆ . . .

**ಪ್ರಿನ್ಸಿವಲ್ಲೆ** : ಬರುತ್ತಿದ್ದಾನೆ . . .

[ಕಾವಲಿನವನು ತೆರೆಯೆತ್ತುವನು. ಪ್ರವೇಶ—ಟ್ರೈವಲ್ಸಿಯೊ.

**ಟ್ರೈವಲ್ಸಿಯೊ** : ಕೋಟೆಯ ಮೇಲಿನ ಆ ವಿಚಿತ್ರವಾದ ಬೆಳಕನ್ನು ಗಮನಿಸಿದಿರಾ ? ಏನೋ ಸಂಜ್ಞೆಮಾಡುತ್ತಿರುವ ಹಾಗಿದೆಯಲ್ಲವೆ ? . . .

**ಪ್ರಿನ್ಸಿವಲ್ಲೆ** : ಸಂಜ್ಞೆಮಾಡುತ್ತಿರುವರು ಎನ್ನಿಸುವುದೆ ?

**ಟ್ರೈವಲ್ಸಿಯೊ** : ಅದರ ಬಗ್ಗೆ ನನಗೇನೂ ಸಂದೇಹವಿಲ್ಲ . . . ನಿನ್ನೊಡನೆ ಮಾತಾಡಬೇಕಾಗಿದೆ, ಪ್ರಿನ್ಸಿವಲ್ಲೆ.

**ಪ್ರಿನ್ಸಿವಲ್ಲೆ** : ಹೇಳು. ಹೋಗು, ವೀಡಿಯೊ, ಆದರೂ ಬಹು ದೂರ ಹೋಗಬೇಡ ; ನೀನು ಬೇಕಾಗಬಹುದು.

[ವೀಡಿಯೊ ಹೋಗುವನು.

**ಟ್ರೈವಲ್ಸಿಯೊ** : ಪ್ರಿನ್ಸಿವಲ್ಲೆ, ನಿನ್ನನ್ನು ಕಂಡರೆ ನನಗೆ ತುಂಬ ಗೌರವ ಎಂಬುದನ್ನು ನೀನು ಬಲ್ಲೆ. ಈಗಾಗಲೇ ಅದನ್ನು ಕುರಿತು ನಿನಗೆ ಅನೇಕ ಸಲ ಸಾಕ್ಷ್ಯ ಕಾಣಿಸಿದ್ದೇನೆ. ಆದರೂ ಇದರ ಹೊರತಾಗಿ ನಿನಗೆ ತಿಳಿಯದ ಇನ್ನೂ ಅನೇಕ ವಿಷಯ ಉಂಟು ; ಏಕೆಂದರೆ, ತನ್ನ ಅಂತರಂಗದ ರಹಸ್ಯಗಳಿಗೆ ಹೊಂದಿಬಂದವರು ಕೂಡ ತಿಳಿಯಲಾಗದಂತೆ ಕೆಲವು ಸಂಗತಿಗಳನ್ನು ಗುಪ್ತವಾಗಿರಿಸಬೇಕೆಂಬುದು ಫ್ಲಾರೆನ್ಸಿನ ರಾಜ್ಯನೀತಿ ; ಕೆಲವರು ಅದನ್ನು ವಿಶ್ವಾಸಘಾತಕವಾದದ್ದು ಎಂದರೂ ಅದು ವಿವೇಚನೆಯಿಂದ ಕೂಡಿದ ನೀತಿ. ಅದರ ಗಭೀರವಾದ ಆಜ್ಞೆಗಳನ್ನು ನಾವೆಲ್ಲರೂ ಶಿರಸಾವಹಿಸುತ್ತೇವೆ ;

ಅದರ ಪರಮೋತ್ತಮವಾದ ಮೇಧಾಶಕ್ತಿಯಿಂದ ಉದ್ಭವಿಸುವ ಗುಪ್ತಮಂತ್ರಗಳ ಭಾರವನ್ನು ನಮ್ಮಲ್ಲಿ ಪ್ರತಿಯೊಬ್ಬನೂ ಧೈರ್ಯದಿಂದ ವಹಿಸಬೇಕು. ಇಷ್ಟು ಹೇಳಿದರೆ ಸಾಕು; ನೀನು ಚಿಕ್ಕ ವಯಸ್ಸಿನವನಾದರೂ, ನಿನ್ನ ಜನ್ಮ ಅಜ್ಞಾತ ವಾದುದಾದರೂ, ಈ ಜನರಾಜ್ಯದ ಮಹದದ್ಭುತವಾದ ರಣಸೇನೆಯ ನಾಯಕತ್ವಕ್ಕೆ ನಿನ್ನನ್ನು ಆಯುವ ವಿಷಯದಲ್ಲಿ ನನ್ನ ಕೈವಾಡವೂ ತಕ್ಕಮಟ್ಟಿಗಿತ್ತೆಂದು ತಿಳಿ; ಈ ಆಯ್ಕೆಗಾಗಿ ವಿಷಾದಪಡಬೇಕಾದ ಪ್ರಮೇಯ ಒದಗಿ ಬಂದಿಲ್ಲವೆಂಬುದೂ ನಿಜವೇ. ಆದರೆ, ಈಗ ಕೆಲವು ಕಾಲದಿಂದ, ನಿನಗೆ ಪ್ರತಿಯಾಗಿ ಒಂದು ಪಕ್ಷ ರಚನೆಯಾಗುತ್ತಿದೆ. ಇದನ್ನು ನಿನಗೆ ಹೇಳಬಹುದೋ ಬಾರದೋ, ನಿನ್ನ ವಿಷಯದಲ್ಲಿ ನನಗಿರುವ ನಿಃಸ್ಪೃಹವಾದ ಸ್ನೇಹವು ನನ್ನ ಕರ್ತವ್ಯದ ಮೇರೆಯನ್ನು ಮೀರಿ ಅತಿಕ್ರಮಿಸುತ್ತಿದೆಯೋ, ನಾ ಕಾಣೆ. ಆದರೂ ಕೆಲವು ಸಂದರ್ಭಗಳಲ್ಲಿ, ದುಡುಕಿ ನಡಸುವ ಔದಾರ್ಯಕ್ಕಿಂತ ಅತಿಯಾಗಿ ಮಾಡಿಕೊಂಡ ಕರ್ತವ್ಯಪಾಲನೆಯೇ ಹೆಚ್ಚು ಅನರ್ಥಕಾರಿಯಾಗುವುದುಂಟು. ಆದ್ದರಿಂದ, ನಿನಗೆ ಶತ್ರುಗಳಿದ್ದಾರೆಂಬುದನ್ನು ನೀನು ತಿಳಿದಿರುವುದು ವಾಸಿ; 'ನೀನು ಬೇಗ ಸಿಟ್ಟಯಿಸಲಾರೆ, ನಿನಗೆ ಕ್ಷಣಕ್ಕೊಂದು ಮನಸ್ಸು, ನೀನು ಪೈಗಳ್ಳ' ಎಂದು ಅವರು ಬಹು ಘೋರವಾದ ಆಪಾದನೆಗಳನ್ನು ಹೊರಿಸುತ್ತಿದ್ದಾರೆ. ಇನ್ನು ಕೆಲವರು ನಿನ್ನ ಸ್ವಾಮಿಭಕ್ತಿಯನ್ನು ಶಂಕಿಸುವುದಕ್ಕೂ ಹೇಸುವುದಿಲ್ಲ. ಹೀಗೆ ಆಡಿಕೊಂಡದ್ದಕ್ಕೆಲ್ಲ ಬಣ್ಣ ಬರುವಂತೆ ಚಮತ್ಕಾರದಿಂದ ಚಾಡಿಗಳನ್ನು ಜೋಡಿಸುತ್ತಿದ್ದಾರೆ. ಪ್ರಜಾಸಭೆಯಲ್ಲಿ ಮೊದಲೇ ನಿನ್ನನ್ನು ಕಂಡರೆ ಆಗದಿದ್ದವರು ಇದರಿಂದ ಇನ್ನಷ್ಟು ವಿರೋಧವಾಗಿದ್ದಾರೆ. ಅವರು ಎಷ್ಟು ದೂರ ಹೋಗಿರುವರೆಂದರೆ—ನಿನ್ನನ್ನು ಸೆರೆಹಿಡಿಯುವುದು ಹೇಗೆ, ನಿನ್ನನ್ನು ವಿಚಾರಣೆಗೆ ಗುರಿಪಡಿಸುವುದು ಹೇಗೆ ಎಂಬುದನ್ನು ಚರ್ಚೆ ಮಾಡತೊಡಗಿದ್ದಾರೆ. ಅದೃಷ್ಟವಶದಿಂದ, ನನಗೆ ಇದು ಸಕಾಲದಲ್ಲಿ ತಿಳಿದುಬಂತು. ನಾನು ಕೂಡಲೆ ಫ್ಲಾರೆನ್ಸಿಗೆ ತ್ವರೆಯಿಂದ ಹೋದೆ, ಅವರ ಸಾಕ್ಷಿಗೆ ಪ್ರತಿಸಾಕ್ಷಿ ಕೊಡುವುದು ನನಗೇನೂ ಕಷ್ಟವಾಗಲಿಲ್ಲ. ನಾನು ನಿನಗೆ ಜಾಮೀನಾಗಿ ನಿಂತೆ. ನಿನ್ನ ಮೇಲೆ ನನಗಿರುವ ವಿಶ್ವಾಸ ಒಂದು ಕ್ಷಣವಾದರೂ ಕದಲಿದ್ದಿಲ್ಲ; ಈಗ ಆ ವಿಶ್ವಾಸವನ್ನು ನೀನು ಸಾರ್ಥಕಪಡಿಸಬೇಕು; ಏಕೆಂದರೆ, ನೀನು ಕಾರ್ಯಪರನಾಗದಿದ್ದರೆ, ನಾವು ಮುಳುಗಿದಂತೆಯೇ.

ನನ್ನ ಸಹೋದ್ಯೋಗಿಯಾದ ಮಾನ್ಯ ಮಾಲಡ್ಯೂರನನ್ನು ಬಿಬ್ಬಿಯೇನದ ಬಳಿ ವೆನಿಸಿನ ದಳದವರು ತಡೆಗಟ್ಟಿದ್ದಾರೆ. ದಕ್ಷಿಣದಿಂದ ಇನ್ನೊಂದು ಸೈನ್ಯವು ಫ್ಲಾರೆನ್ಸಿನ ಮೇಲೆ ಧಾಳಿಯಿಡುತ್ತಿದೆ. ನಗರಕ್ಕೆ ಅಪಾಯ ಒದಗಿದೆ. ಇಷ್ಟಾದರೂ, ನಾವು ಇಷ್ಟು ಕಾಲವೂ ನಿರೀಕ್ಷಿಸುತ್ತಿರುವ ಮುತ್ತಿಗೆಯನ್ನು ನೀನು ನಾಳೆ ಬೆಳಗ್ಗೆ ನಡಸಿದರೆ, ಈಗಲೂ ಕ್ಷೇಮವಾಗುತ್ತದೆ. ಇದರಿಂದ ನಮ್ಮ ಉತ್ತಮವಾದ ಸೈನ್ಯಕ್ಕೂ, ಪರಾಜಯವೆಂಬುದನ್ನು ಎಂದೂ ಕಾಣದ ಅದರ ದಳಪತಿಗೂ ವಿಮೋಚನೆಯಾಗುವುದು ; ನಾವು ತಲೆಯೆತ್ತಿಕೊಂಡು ಫ್ಲಾರೆನ್ಸಿಗೆ ಹಿಂದಿರುಗಲು ಸಾಧ್ಯವಾಗುವುದು ; ನಮ್ಮ ಸಂಭ್ರಮವನ್ನೂ ನಮ್ಮ ವಿಜಯವನ್ನೂ ಕಂಡು, ನೆನ್ನೆ ನಮಗೆ ಶತ್ರುಗಳಾಗಿದ್ದವರು ನಮ್ಮನ್ನು ಮೆಚ್ಚಿಕೊಂಡು ನಮ್ಮ ಪಕ್ಷದವರೇ ಆಗುವರು . . .

**ಪ್ರಿನ್ಸಿವಲ್ಲೆ :** ನೀನು ನನಗೆ ಹೇಳಬೇಕಾದದ್ದು ಇಷ್ಟೆ ತಾನೆ ?

**ಟ್ರೈವಲ್ಸಿಯೊ :** ಹೆಚ್ಚುಕಡಮೆ ಇಷ್ಟೆ ; ನಮ್ಮಿಬ್ಬರ ಸಾಹಚರ್ಯದಿಂದ ದಿನದಿನಕ್ಕೂ ನಿನ್ನ ವಿಷಯದಲ್ಲಿ ನನಗೆ ನಿಜವಾದ ಪ್ರೀತಿ ವಿಶ್ವಾಸ ಬೆಳೆಯುತ್ತಿದೆ ಎಂಬುದನ್ನು ಮಾತ್ರ ಪ್ರಸ್ತಾಪಿಸದೆ ಬಿಟ್ಟಿದ್ದೇನೆ. ಕೆಲವು ಸಲ ಪರಸ್ಪರ ವಿರುದ್ಧವೆಂಬಂತೆ ತೋರುವ ಕಟ್ಟುಕಟ್ಟಲೆಗಳಿಂದ ನಾವೂ ಇಕ್ಕಟ್ಟಿನ ಪರಿಸ್ಥಿತಿಗೆ ಒಳಗಾಗುತ್ತೇವೆ ; ನಾಯಕನಾದವನ ಅಧಿಕಾರವು—ಅಪಾಯ ಸಂಭವಿಸಿದ ಹೊತ್ತಿನಲ್ಲಿ—ಕೆಲವು ಸಲ ಫ್ಲಾರೆನ್ಸಿನ ಆ ಗುಪ್ತಮಂತ್ರದ ಶಕ್ತಿಗಳಿಗೆ ಅಧೀನವಾಗಿರಬೇಕೆಂದು ಆ ಕಟ್ಟುಕಟ್ಟಲೆಗಳು ವಿಧಿಸುತ್ತವೆ. ಈ ದಿವಸ ನಾನು ಫ್ಲಾರೆನ್ಸಿನ ಆ ಶಕ್ತಿಯ ವಿನೀತನಾದ ಪ್ರತಿನಿಧಿ ಆದರೂ . . .

**ಪ್ರಿನ್ಸಿವಲ್ಲೆ :** ಈಗತಾನೆ ನನ್ನ ಕೈಗೆ ಬಂದಿರುವ ಈ ಆಜ್ಞೆ, ಇದು ನೀನು ಬರೆದದ್ದೊ ?

**ಟ್ರೈವಲ್ಸಿಯೊ :** ಹೌದು.

**ಪ್ರಿನ್ಸಿವಲ್ಲೆ :** ನಿನ್ನ ಸ್ವಹಸ್ತಾಕ್ಷರದಲ್ಲೆ ?

**ಟ್ರೈವಲ್ಸಿಯೊ :** ನಿಸ್ಸಂದೇಹವಾಗಿ. ಈ ಪ್ರಶ್ನೆ ಏಕೆ ?

**ಪ್ರಿನ್ಸಿವಲ್ಲೆ :** ಈ ಎರಡು ಪತ್ರ—ಇವುಗಳ ಗುರುತಾಗುವುದೆ ?

**ಟ್ರೈವಲ್ಸಿಯೊ :** ಇರಬಹುದು. ನನಗೆ ಗೊತ್ತಿಲ್ಲ; ಅವುಗಳಲ್ಲಿ ಏನಿದೆ ? . . . ನಾನು ಮೊದಲು . . .

**ಪ್ರಿನ್‌ಸಿವಲ್ಲೆ :** ಏನೂ ಅಗತ್ಯವಿಲ್ಲ. ನನಗೆ ಗೊತ್ತು.

**ಟ್ರೈವಲ್ಸಿಯೊ :** ನೀನು ನಡುವೆ ತಡೆಗಟ್ಟಿದ ಎರಡು ಕಾಗದ ಅವೇಯೊ? ನೀನು ಹಾಗೇ ಮಾಡೀಯೆ ಎಂದುಕೊಂಡಿದ್ದೆ . . . ಇಟ್ಟ ಪರೀಕ್ಷೆ ನೆಟ್ಟಗಾಯಿತು.

**ಪ್ರಿನ್‌ಸಿವಲ್ಲೆ :** ನೀನು ಎಳೆಯ ಮಗುವಿನೊಡನೆ ಆಡುತ್ತಿಲ್ಲ. ಈ ಇಂತಹ ದರಿದ್ರ ಆಟಗಳನ್ನು ಆಶ್ರಯಿಸುವುದು ಬೇಡ; ಬೇಗ ಮುಗಿಸಬೇಕೆಂದು ನಾನು ಕಾತರನಾಗಿದ್ದ ಈ ಭೇಟಿಯನ್ನು ಇನ್ನು ವಿಳಂಬಿಸುವುದು ಬೇಡ; ಫ್ಲಾರೆನ್ಸಿನ ಯಾವ ವಿಜಯೋತ್ಸವದಲ್ಲಿಯೂ ನನಗೆ ದೊರಕದಂತಹ ಬಹು ಮಾನವನ್ನು ಇನ್ನು ತಡಮಾಡಿಕೊಳ್ಳುವುದು ಬೇಡ! . . . ನನ್ನ ಪ್ರತಿಯೊಂದು ಕಾರ್ಯವನ್ನೂ ಈ ಪತ್ರಗಳಲ್ಲಿ ಅತ್ಯಂತ ನೀಚವಾದ ಮಿಥ್ಯಾರೋಪಣೆಗಳಿಂದ ಖಂಡಿಸಿದ್ದೀಯೆ. ಇದೇನು, ಕೇವಲ ಮತ್ಸರದಿಂದ ಆದದ್ದೋ, ಅಥವಾ ಜಯಶೀಲನಾದ ಜೀತಗಾರ ಸೈನಿಕನನ್ನು ಸುಲಭವಾಗಿ ನಿವಾರಣೆಮಾಡಿಕೊಳ್ಳು ವುದಕ್ಕೆ ಅಗತ್ಯವಾದ ನೆಪವೊಂದನ್ನು ಫ್ಲಾರೆನ್ಸಿನ ದ್ರೋಹದ ದುರಾಶೆಗೆ ಒದ ಗಿಸಿಕೊಡಬೇಕೆಂದು ಆದದ್ದೋ? . . . ಈ ಕಾಗದಗಳಲ್ಲಿ, ಎಲ್ಲ ಸಂಗತಿಗಳನ್ನೂ ಎಂತಹ ಪೈಶಾಚಿಕ ಕೌಶಲದಿಂದ ವಿಕಾರಮಾಡಿರುವೆಯೆಂದರೆ, ಅನೇಕ ಗಳಿಗೆ "ನಾನು ನಿರ್ದೋಷಿಯೆ?" ಎಂದು ನನಗೇ ಸಂದೇಹವುಂಟಾಗಿದೆ. ನನ್ನ ಪ್ರತಿಯೊಂದು ಕೃತ್ಯವನ್ನೂ ವಿರೂಪಮಾಡಿ, ಅಪಮಾನಿಸಿ, ಕೊಚ್ಚೆಯಲ್ಲಿ ತುಳಿ ದಿದ್ದೀಯೆ; ಅದೂ ಈ ಮುತ್ತಿಗೆಯ ಮೊತ್ತಮೊದಲನೆಯ ವಾರದಿಂದ ತೊಡಗಿ, ನನ್ನ ಕಣ್ಣು ತೆರೆದ ಆ ಗಳಿಗೆಯವರೆಗೂ. ಅದೇ ಪುಣ್ಯದ ಗಳಿಗೆಯಲ್ಲೇ ನಿಶ್ಚಯಿಸಿಕೊಂಡೆ, ನಿನ್ನ ಶಂಕೆ ಸಂದೇಹಗಳನ್ನು ಸಾರ್ಥಕಪಡಿಸಬೇಕೆಂದು. ನಿನ್ನ ಪತ್ರಗಳನ್ನು ಎಚ್ಚರದಿಂದ ಪ್ರತಿಮಾಡಿಸಿದ್ದೇನೆ—ಅವುಗಳನ್ನು ಫ್ಲಾರೆ ನ್ಸಿಗೆ ಕಳುಹಿಸಿದ್ದೇನೆ. ಅಲ್ಲಿಂದ ಬಂದ ಉತ್ತರಗಳನ್ನು ತಡೆಗಟ್ಟಿದ್ದೇನೆ. ನಿನ್ನ ಮಾತನ್ನು ಒಪ್ಪಿದ್ದಾರೆ, ನಿನ್ನನ್ನು ನಂಬಿದ್ದಾರೆ; ಏನೇನು ಆರೋಪಮಾಡ ಬೇಕೋ ಅದನ್ನೆಲ್ಲ ನಿನಗೆ ಒದಗಿಸಿರುವಾಗ, ನೀನು ಬರೆದದ್ದನ್ನು ನಂಬಲು ತಡವೇಕೆ? ನನ್ನನ್ನು ವಿಚಾರಿಸದೆಯೇ ನನ್ನ ದೋಷ ನಿರ್ಣೀತವಾಯಿತು; ನನಗೆ ಮರಣದಂಡನೆ ವಿಧಿಸಿದರು . . . ನೀನು ಹವಣಿಸಿರುವ ವಿನಾಶದ ರುಜುವಾತುಗಳಿಂದ ತಪ್ಪಿಸಿಕೊಳ್ಳಬೇಕಾದರೆ ದೇವಲೋಕದ ದೇವತೆಗಳ

ನಿರ್ದೋಷಿತ್ವವಿದ್ದರೂ ನನಗೆ ಸಾಧ್ಯವಾಗುವುದಿಲ್ಲವೆಂದು ನಾನು ಬಲ್ಲೆ . . . ಆದ್ದರಿಂದ, ಈಗ ನಾನು ಮುಂದೆ ನೆಗೆದು, ನಿಮ್ಮ ಈ ಸಣಕಲು ಸಂಕಲೆಗಳನ್ನು ಕಿತ್ತೆಸೆದು, ನಾನೇ ಮೊದಲ ಕಾರ್ಯಾರಂಭವನ್ನು ಆಚರಿಸುತ್ತೇನೆ. ಇದುವರೆವಿಗೂ ನಾನು ಸ್ವಾಮಿದ್ರೋಹಿಯಾದದ್ದಿಲ್ಲ; ಆದರೆ ಈ ಎರಡು ಪತ್ರ ನನ್ನ ಕೈಗೆ ಬಿದ್ದಂದಿನಿಂದ ನಿನ್ನ ವಿನಾಶವನ್ನು ಸಿದ್ಧಪಡಿಸುತ್ತಿದ್ದೇನೆ. ಈ ರಾತ್ರಿ ನಿಮ್ಮನ್ನು ವಿಕ್ರಯಿಸುತ್ತೇನೆ, ನಿನ್ನನ್ನೂ ನಿನ್ನ ಅಯೋಗ್ಯ ಪ್ರಭುಗಳನ್ನೂ; ನನ್ನಿಂದ ಸಾಧ್ಯವಾದಷ್ಟು ಕ್ರೂರವಾದ, ಅತ್ಯಂತ ಹಾನಿಕರವಾದ ಆಘಾತವನ್ನು ಸಲ್ಲಿಸುತ್ತೇನೆ. ದ್ರೋಹವನ್ನು ಸದ್ಗುಣವೆಂದು ಕೊಂಡಾಡಿ, ಮೋಸ ಕಪಟ ಸುಳ್ಳು ಕೃತಘ್ನತೆ ದ್ರೋಹ ಇವುಗಳಿಂದ ಜಗತ್ತನ್ನು ಆಳಲು ಬಯಸುವ ಒಂದು ನಗರವನ್ನು ಈ ರೀತಿಯಾಗಿ ಕೆಳಗುರುಳಿಸುವುದು ನನ್ನ ಜೀವಮಾನದ ಅತ್ಯಂತ ಉದಾತ್ತವಾದ ಕೃತ್ಯವೆಂದು ಗಣಿಸುತ್ತೇನೆ . . . ನೀವು ಜಗತ್ತಿನಲ್ಲೆಲ್ಲ ದುರ್ನೀತಿಗಳನ್ನು ಹರಡದಂತೆ ನಿಮ್ಮನ್ನು ನಿವಾರಿಸುತ್ತಿರುವ ನಿಮ್ಮ ಹಳೆಯ ಶತ್ರುವಾದ ಪೀಸಾ, ಈ ಸಂಜೆ, ನನ್ನ ಸಹಾಯದಿಂದ, ತನ್ನ ಕೋಟೆಗೋಡೆಗಳು ಇದುವರೆಗೂ ನಿಮ್ಮನ್ನು ನಿವಾರಿಸುವುದು; ಈ ಸಂಜೆ ಪೀಸಾವನ್ನು ಉಳಿಸಲಾಗುವುದು, ಮತ್ತೆ ಅದು ಪ್ರತಿಭಟಿಸುತ್ತ ತಲೆಯೆತ್ತಿ ನಿಲ್ಲುವುದು . . . ಆಃ, ಏಳಬೇಡ, ವ್ಯರ್ಥವಾಗಿ ಕೈಯಾಡಿಸಬೇಡ . . . ಮುಂಜಾಗ್ರತೆಗಳನ್ನು ಏರ್ಪಡಿಸಿಯಾಗಿದೆ, ಅವು ತಪ್ಪುವಂತಿಲ್ಲ; ನೀನು ನನ್ನ ಕೈಗೆ ಸಿಕ್ಕಿದ್ದೀಯೆ; ನಿನ್ನನ್ನು ಈಗ ನಾನು ಹಿಡಿದಿರುವಂತೆಯೇ ಫ್ಲಾರೆನ್ಸಿನ ಗತಿಯನ್ನೂ ನನ್ನ ಅಂಗೈಯಲ್ಲಿ ಹಿಡಿದಿದ್ದೇನೆ . . .

[ಟ್ರಿವಲ್ಸಿಯೊ ತನ್ನ ಕಠಾರಿಯನ್ನು ಎಳೆದು, ಚಕ್ಕನೆ ಪ್ರಿನ್ಸಿವಲ್ಲೆಗೆ ಗುರಿಯಿಟ್ಟು ಎಸೆಯುವನು.

**ಟ್ರಿವಲ್ಸಿಯೊ :** ಇನ್ನೂ ಇಲ್ಲ . . . ನನ್ನ ಕೈಗಳು ಬಿಡುವಾಗಿರುವವರೆಗು ಇಲ್ಲ . . .

[ಪ್ರಿನ್ಸಿವಲ್ಲೆ, ತನ್ನ ತೋಳಿನಿಂದ ಆ ಏಟನ್ನು ನಿವಾರಿಸಿಕೊಂಡು, ಆ ಆಯುಧವನ್ನು ಮೇಲೆ ಹಾರಿಸಿದಾಗ ಅದು ಅವನ ಮುಖಕ್ಕೆ ತಗಲುವುದು. ಅವನು ಟ್ರಿವಲ್ಸಿಯೋವಿನ ಮಣಿಕಟ್ಟನ್ನು ಬಿಗಿಯಾಗಿ ಹಿಡಿಯುವನು.

**ಪ್ರಿನ್ಸಿವಲ್ಲೆ :** ಭೀತಿಯಿಂದ ನೀನು ಹೀಗೆ ಆಡುವೆಯೆಂದು ನಾನೆಣಿಸಿರಲಿಲ್ಲ . . . ಇದೋ, ಈಗ ನೀನು ನನ್ನ ವಶ, ಬೇಕಾದರೆ ಒಂದು ಕೈಯಿಂದ ನಿನ್ನನ್ನು ಹಿಸುಕಿಬಿಡಬಲ್ಲೆ . . . ಈ ಕಠಾರಿಯನ್ನು ಕೆಳಗಿಳಿಸಿದರೆ ಸಾಕು . . . ಆಗಲೇ ಅದು ನಿನ್ನ ಕುತ್ತಿಗೆಯನ್ನು ಹುಡುಕುತ್ತಿರುವಂತಿದೆ. ಏನು! ಏನೂ ಹೇಳುವುದಿಲ್ಲವೆ; ಭಯವಾಗುವುದಿಲ್ಲವೋ ನಿನಗೆ ?

**ಟ್ರೈವಲ್ಸಿಯೊ :** (ತಾತ್ಸಾರದಿಂದ,) ಇಲ್ಲ; ಕಠಾರಿಯನ್ನು ಉಪಯೋಗಿಸು, ಅದು ನಿನ್ನ ಹಕ್ಕು. ನನ್ನ ಜೀವ ಹೋದಂತೆಯೇ ಎಂದು ತಿಳಿದಿದ್ದೆ.

**ಪ್ರಿನ್ಸಿವಲ್ಲೆ :** (ತನ್ನ ಮುಷ್ಟಿಯನ್ನು ಸಡಿಲಿಸಿ,) ಆಃ, . . . ಆದರೆ, ನಿಜವಾಗಿಯೂ, ನೀನು ಈಗ ಮಾಡಿದ ಕೆಲಸ, ಇದು ವಿಚಿತ್ರ . . . ಹೀಗೆ ಮಾಡುವುದು ಕೂಡ ತುಂಬ ವಿರಳ . . . ಸಾವಿನ ಕೈಯನ್ನು ಇಷ್ಟು ಸಿದ್ಧವಾಗಿ ಹಿಡಿದು ಎಳೆದುಕೊಳ್ಳುವ ಸೈನಿಕರು ಬಹಳ ಮಂದಿಯಲ್ಲ; ಇಷ್ಟು ನಿರ್ಬಲವಾದ ದೇಹದೊಳಗೆ . . . ನಾನು ಬೇರೆ ಎಂದುಕೊಂಡಿರಲಿಲ್ಲ . . .

**ಟ್ರೈವಲ್ಸಿಯೊ :** ಕತ್ತಿಯ ಮೊನೆಯನ್ನು ಬಿಟ್ಟರೆ ಬೇರೆ ಧೈರ್ಯವೇ ಇರಲಾರದೆಂದು ನೀವು ಕತ್ತಿಯ ಜನ, ಬಹುಶಃ, ತಪ್ಪು ಮಾಡುತ್ತಿದ್ದೀರಿ.

**ಪ್ರಿನ್ಸಿವಲ್ಲೆ :** ನಿನ್ನ ಮಾತು ಸರಿಯಿರಬಹುದು . . . ಒಳ್ಳೆಯದು . . . ನೀನು ನಿರ್ಬಂಧದಲ್ಲಿದ್ದರೂ ನಿನಗೆ ಏನೂ ಅಪಾಯ ಸಂಭವಿಸದು . . . ನಾನೂ ನೀನೂ ಸೇವಿಸುವ ದೇವತೆಗಳು ಬೇರೆ ಬೇರೆ. (ತನ್ನ ಮುಖದಿಂದ ರಕ್ತವನ್ನು ಒರಸಿಕೊಳ್ಳುವನು.) ಆಃ, ಹೊಡೆದ ಏಟಿನಲ್ಲಿ ಕೌಶಲವಿಲ್ಲದೆ ಇಲ್ಲ . . . ಸ್ವಲ್ಪ ದುಡುಕಾಯಿತಾದರೂ ಪೆಟ್ಟು ಬಲವಾದದ್ದೇ . . . ಇನ್ನೇನು ತಗಲಬೇಕು ಎಂಬಂತೆ ತಪ್ಪಿತು . . . ಈಗ ಹೇಳು : ಎಲ್ಲಿಗೆ ಹೋಗುವುದಕ್ಕೆ ಯಾರೂ ಕಾತರಪಡುವುದಿಲ್ಲವೋಅಲ್ಲಿಗೆ ನಿನ್ನನ್ನು ಇನ್ನೇನು ಕಳುಹಿಸಿಯೇಬಿಡುತ್ತಿದ್ದನು ಎಂಬವನು ನಿನ್ನ ಕೈಯಲ್ಲಿ ಸಿಕ್ಕಿಬಿದ್ದಿದ್ದರೆ, ಅವನನ್ನು ಏನುಮಾಡುತ್ತಿದ್ದೆ ?

**ಟ್ರೈವಲ್ಸಿಯೊ :** ನಾನು ಬೇರೆ ಅವನನ್ನು ಉಳಿಸುತ್ತಿರಲಿಲ್ಲ.

**ಪ್ರಿನ್ಸಿವಲ್ಲೆ :** ನಿನ್ನ ಮಾತು ನನಗೆ ಅರ್ಥವಾಗದು . . . ನೀನು ವಿಚಿತ್ರ . . . ಆ ಕಾಗದಗಳನ್ನು ಬರೆದದ್ದು ಹೀನಕೃತ್ಯವೆಂದು ಒಪ್ಪಿಕೊ. ಫ್ಲಾರೆನ್ಸಿಗಾಗಿ ಮೂರು ಮಹಾಯುದ್ಧಗಳಲ್ಲಿ ನನ್ನ ರಕ್ತವನ್ನು ಬಸಿದಿದ್ದೇನೆ; ಜೀವದಾಸೆ ಬಿಟ್ಟು, ಮೈಮುರಿಯ ದುಡಿದಿದ್ದೇನೆ; ಅದರ ಲಾಭವೆಲ್ಲ ನಿಮ್ಮದೇ

ಆಗಿದೆ. ನಾನು ಪ್ರಜಾರಾಜ್ಯದ ಸ್ವಾಮಿನಿಷ್ಠ ಸೇವಕನಾಗಿದ್ದೆ, ಒಂದು ಸಲವಾದರೂ ಸ್ವಾಮಿದ್ರೋಹ ನನ್ನ ಹೃದಯದಲ್ಲಿ ಇಣಿಕಿದ್ದಿಲ್ಲ, . . ಇದು ನಿನಗೆ ಗೊತ್ತಿರಬೇಕು, ನನ್ನ ಮೇಲೆ ಗೂಢಚಾರನ ಕಾವಲಿದ್ದ ನಿನಗೆ . . . ಆದರೂ, ನಿನ್ನ ಕಾಗದಗಳಲ್ಲಿ, ಅದು ಏನು ದುಷ್ಟ ಮತ್ಸರವೋ ಅಥವಾ ದ್ವೇಷವೋ, ನನ್ನ ಪ್ರತಿಯೊಂದು ಕೃತ್ಯವನ್ನೂ ನಾನು ಇಟ್ಟ ಪ್ರತಿ ಹೆಜ್ಜೆಯನ್ನೂ ನೀನು ವಿರೂಪಗೊಳಿಸಿದ್ದೀಯೆ. ನನಗಿಪ್ಪುದು ಫ್ಲಾರೆನ್ಸಿನ ಚಿಂತೆಯೊಂದೇ; ನೀನಾದರೋ ನಿಂದೆಯ ಮೇಲೆ ನಿಂದೆ ಹೊರೆಸಿ, ಸುಳ್ಳಿನ ಮೇಲೆ ಸುಳ್ಳು ಪೇರಿಸಿ . . .

**ಟ್ರೈವಲ್ಸಿಯೊ :** ವಸ್ತುಸ್ಥಿತಿ ತಪ್ಪರ್ಥವಾಗುವಂತಿತ್ತು — ಅದನ್ನು ಕಟ್ಟಿಕೊಂಡೆನು. ಸೈನಿಕನಾದವನು ಎರಡು ಮೂರು ವಿಜಯಗಳಿಂದ ಮೈಮರೆತು, ತನ್ನನ್ನು ಕಳುಹಿಸಿದವರ ಉದ್ದೇಶ ತನ್ನದಕ್ಕಿಂತ ಘನವಾದುದೆಂಬುದನ್ನು ಮರೆತು, ತಾನು ಸೇವಿಸುವ ಪ್ರಭುಗಳ ಆಜ್ಞೆಯನ್ನು ಪಾಲಿಸದೆ ಹೋಗುವಂಥ ಅಪಾಯದ ಹೊತ್ತು ಬಂದರೆ—ಅದನ್ನು ಪ್ರತಿಭಟಿಸಬೇಕೆಂದು ನನಗೆ ನೇಮಕವಾಗಿತ್ತು. ಅಂಥ ಹೊತ್ತು ಬಂದಿದೆಯೆಂಬುದು ಈಗ ಗೊತ್ತಾಯಿತಲ್ಲವೆ. ಫ್ಲಾರೆನ್ಸಿನವರಿಗೆ ನೀನೆಂದರೆ ಅತಿ ಅಚ್ಚುಮೆಚ್ಚು. ಅವರ ಆದರ್ಶದ ವಿಗ್ರಹಗಳನ್ನು ನುಚ್ಚುನೂರಾಗಿಸುವುದು ನಮ್ಮ ಕರ್ತವ್ಯ. ಆ ಹೊತ್ತಿನಲ್ಲಿ ಅವರಿಗೆ ಸ್ವಲ್ಪ ಕೋಪ ಬರಬಹುದು, ಆದರೂ ಅಪಾಯಕರವಾದ ಅವರ ಸ್ವೇಚ್ಛಾವೃತ್ತಿಗಳನ್ನು ಎದುರಿಸಬೇಕೆಂದಲ್ಲವೆ ನಮ್ಮ ಸೃಷ್ಟಿಯಾಗಿರುವುದು; ಅವರ ಆರಾಧ್ಯಮೂರ್ತಿಗೆ ವಿನಾಶದ ಮುದ್ರೆಯನ್ನು ಒತ್ತುವ ಹೊತ್ತು ಬಂದಿತೆಂದು ನನಗೆನ್ನಿಸಿತು. ಫ್ಲಾರೆನ್ಸಿಗೆ ಎಚ್ಚರಿಕೆ ಕೊಟ್ಟೆ. ನನ್ನ ಸುಳ್ಳು ಸಮಾಚಾರಗಳ ಅಂತರಾರ್ಥ ಅವರಿಗೆ ಗೊತ್ತಾಯಿತು . . .

**ಪ್ರಿನ್ಸಿವಲ್ಲೆ:** ಸಮಯವೊದಗಿರಲಿಲ್ಲ; ನಿನ್ನ ರೀತಿಗೇಡಿನ ಪತ್ರಗಳಿಲ್ಲದಿದ್ದರೆ, ಎಂದೂ ಒದಗುತ್ತಲೇ ಇರಲಿಲ್ಲ . . .

**ಟ್ರೈವಲ್ಸಿಯೊ :** ಒದಗುವ ಸಂಭವವಿತ್ತು, ಎಂಬುದಷ್ಟೇ ಸಾಕು . . .

**ಪ್ರಿನ್ಸಿವಲ್ಲೆ:** ಏನು? ಸಂಭವಿಸಬಹುದೆಂಬ ಅಷ್ಟರಿಂದಲೇ ನಿರ್ದೋಷಿಯನ್ನು ಬಲಿಕೊಡುವುದೆ? ಒದಗಲಾರದ ಅಪಾಯಕ್ಕೆ ಹೀಗೆ ನಿಷ್ಕರುಣೆಯಿಂದ ಬಲಿ ಕೊಡುವುದೆ?

**ಟ್ರೈವಲ್ಸಿಯೊ :** ಫ್ಲಾರೆನ್ಸಿನ ಕ್ಷೇಮದ ಮುಂದೆ ಒಬ್ಬನ ಪ್ರಾಣವೇನು!

**ಪ್ರಿನ್ಸಿವಲ್ಲೆ:** ಹಾಗಾದರೆ, ಫ್ಲಾರೆನ್ಸಿನ ಭವಿಷ್ಯದಲ್ಲಿ, ಅದರ ರಾಜ ಕಾರ್ಯದಲ್ಲಿ, ಅದರ ಅಸ್ತಿತ್ವದಲ್ಲಿ ನಿನಗಷ್ಟು ನಂಬಿಕೆಯೆ? ಹಾಗಾದರೆ, ನನಗೆ ಅರ್ಥವಾಗದ ಏನೋ ಮಹತ್ತ್ವ ಅದರಲ್ಲಿರಬೇಕು? . . .

**ಟ್ರೈವಲ್ಸಿಯೊ :** ಹೌದು, ಫ್ಲಾರೆನ್ಸ್ ಒಂದರಲ್ಲಿಯೇ ನನಗೆ ನಂಬಿಕೆ; ಉಳಿದ ವಿಷಯಗಳು ನನ್ನ ಪಾಲಿಗೆ ಶೂನ್ಯ . . .

**ಪ್ರಿನ್ಸಿವಲ್ಲೆ:** ಹೇಗೋ, ಹಾಗೇ ಇರಬಹುದು . . . ನಿನಗೆ ನಂಬಿಕೆ ಇರುವುದರಿಂದ, ನೀನು ಹೇಳುವುದೂ ನ್ಯಾಯ . . . ನನಗೆ ಸ್ವದೇಶವಿಲ್ಲ, ಆದ್ದರಿಂದ ನಾನು ಹೇಳಲಾರೆ. ನನಗೆ ಸ್ವದೇಶವಿಲ್ಲವೆಂದು ನಾನು ಕೆಲವು ಸಲ ಪರಿತಾಪಪಟ್ಟದ್ದುಂಟು . . . ಆದರೆ, ನನಗಿರುವ ಅದು ಏನೋ ಒಂದು ನಿನ್ನ ಪಾಲಿಗೆ ಎಂದಿಗೂ ಬಾರದು; ಅದು ನನ್ನ ಪಾಲಿಗೆ ಬಂದಿರುವಷ್ಟು ಬೇರೆ ಯಾರಿಗೂ ಬಂದದ್ದಿಲ್ಲ . . . ಎಲ್ಲ ನ್ಯೂನತೆಗಳಿಗೂ ಇದೇ ಪರಿಹಾರ ವಾಗುತ್ತದೆ . . . ಹೋಗು; ನಿನ್ನ ದಾರಿ ನಿನಗೆ, ನನ್ನದು ನನಗೆ; ಈ ಒಗಟಿಗಳನ್ನು ತೂಗಲು ಈಗ ಸಮಯವಿಲ್ಲ . . . ನನಗೂ ನಿನಗೂ ಅಂತರ ಅತಿಯಾಗಿರುವುದಾದರೂ, ಕೆಲವು ಕಡೆಗಳಲ್ಲಿ ಇನ್ನೇನು ಮುಟ್ಟುವೆವೋ ಎಂಬಂತೆ ಇದ್ದೇವೆ . . . ಅವನವನಿಗೆ ಅವನವನ ಗತಿ . . . ಕೆಲವರಿಗೆ ಒಂದು ತತ್ವಾನ್ವೇಷಣೆ, ಕೆಲವರಿಗೆ ಒಂದು ವಿಷಯಾಪೇಕ್ಷೆ; ನನ್ನ ಅಪೇಕ್ಷೆಯನ್ನು ಬದಲಿಸುವುದು ನನಗೆ ಹೇಗೆ ಕಷ್ಟವೋ ನಿನ್ನ ಭಾವನೆಯನ್ನು ಬದಲಿಸುವುದು ನಿನಗೆ ಕಷ್ಟವಾಗಬಹುದು . . . ಹೋಗಿ ಬಾ, ಟ್ರೈವಲ್ಸಿಯೊ; ನಮ್ಮದು ಬೇರೆಬೇರೆ ದಾರಿ . . . ಎಲ್ಲಿ, ಕೈಯ ತಾ.

**ಟ್ರೈವಲ್ಸಿಯೊ :** ಇನ್ನೂ ಈಗಲೇ ಅಲ್ಲ. ಶಿಕ್ಷೆಯಾಗುವ ದಿವಸ ನಿನಗೆ ನನ್ನ ಕೈ ತರುತ್ತೇನೆ . . .

**ಪ್ರಿನ್ಸಿವಲ್ಲೆ:** ಹಾಗೆಯೇ ಆಗಲಿ; ಈ ದಿವಸ ನೀನು ಸೋತಿರುವೆ, ನಾಳೆ ನೀನು ಗೆಲ್ಲುವೆ . . . ('ವೀಡಿಯೊ!' ಎಂದು ಕರೆಯುವನು.)

[ವೀಡಿಯೊ ಒಳಗೆ ಬರುವನು.

**ವೀಡಿಯೊ :** ಸ್ವಾಮಿ? ಏನು—ನಿಮಗೆ ಗಾಯವಾಗಿದೆ, ರಕ್ತ ಹರಿಯುತ್ತಿದೆ . . .

**ಪ್ರಿನ್ ಸಿವಲ್ಲೆ**: ಚಿಂತೆಯಿಲ್ಲ . . . ಆ ಇಬ್ಬರು ಕಾವಲರನ್ನು ಕರೆ. ಇವನನ್ನು ಕರೆದುಕೊಂಡೊಯ್ಯಲಿ ; ಅವರಿಂದ ಇವನಿಗೇನೂ ಹಾನಿಯಾಗ ದಂತೆ ನೋಡಿಕೊ . . . ಇವನು ನನ್ನ ಪ್ರೀತಿಗೆ ಪಾತ್ರನಾದ ಶತ್ರು . . . ಯಾರ ಕಣ್ಣಿಗೂ ಬೀಳದ ಕಡೆ, ಸುರಕ್ಷಿತವಾದ ಸ್ಥಳದಲ್ಲಿ ಇವನನ್ನು ಭದ್ರವಾಗಿ ಇರಿಸಲಿ . . . ಇವನನ್ನು ರಕ್ಷಿಸುವುದು ಅವರ ಭಾರ, ನಾನು ಆಜ್ಞೆಮಾಡಿ ದಾಗ ಇವನನ್ನು ಬಿಡತಕ್ಕದ್ದು . . .

[ವೀಡಿಯೊ ಹೋಗುವನು, ಟ್ರೈವಲ್ಸಿಯೋವನ್ನು ಕರೆದುಕೊಂಡು. ಪ್ರಿನ್ ಸಿವಲ್ಲೆ ಕನ್ನಡಿಯ ಮುಂದೆ ನಿಂತು, ತನ್ನ ಗಾಯವನ್ನು ಪರೀಕ್ಷಿಸುವನು.

**ಪ್ರಿನ್ ಸಿವಲ್ಲೆ**: ಗಾಯ ಆಳವಾಗಿಲ್ಲ, ಆದರೂ ಮುಖದಲ್ಲಿ ಕಲೆ ನಿಲ್ಲುವುದು . . . ಇಷ್ಟು ನಿಶ್ಶಕ್ತನಾದ ನರಪೇತಲನಿವನು . . . ಯಾರು ತಾನೆ ಎಂದುಕೊಳ್ಳಬಹುದಾಗಿತ್ತು . . . (ವೀಡಿಯೊ ಹಿಂದಿರುಗುವನು.) ಹೇಳಿದಂತೆ ಮಾಡಿದೆಯ ?

**ವೀಡಿಯೊ**: ಮಾಡಿದ್ದೇನೆ. ಸ್ವಾಮಿ, ಇದರಿಂದ ಸರ್ವನಾಶ . . .

**ಪ್ರಿನ್ ಸಿವಲ್ಲೆ**: ಸರ್ವನಾಶ ! . . . ಆಃ, ಸಾಯುವತನಕ ನನಗೆ ಪ್ರತಿ ದಿವಸವೂ ಇಂತಹ ಸರ್ವನಾಶವಾಗುವುದು ಸಾಧ್ಯವಾದರೆ ! . . . ಸರ್ವ ನಾಶ, ವೀಡಿಯೋ ! . . . ನ್ಯಾಯವಾದ ಪ್ರತೀಕಾರದಿಂದ ಯಾವನಿಗಾದರೂ ಈ ಲೋಕದಲ್ಲಿ ಈಗ ನಾನು ಅನುಭವಿಸುತ್ತಿರುವ ಸುಖಕ್ಕೆ ಸಮಾನವಾದ ಸುಖ ದೊರಕುವುದೆಂದು ನನಗೆನ್ನಿಸುವುದಿಲ್ಲ. ನಾನು ಕನಸುಕಾಣಲು ಕಲಿತ ದಿವಸದಿಂದ ಈ ಸುಖವನ್ನು ಕನಸುಕಾಣುತ್ತಿದ್ದೇನೆ . . . ಇದಕ್ಕಾಗಿ ಕಾಯ್ದಿ ದ್ದೇನೆ, ದೇವರಿಗೆ ಮೊರೆಯಿಟ್ಟಿದ್ದೇನೆ ! ನನ್ನದಾಗಿ, ನನಗೇ ಸೇರಿ, ನನ್ನದು ಆಗಲೇಬೇಕಾಗಿದ್ದ ಅದನ್ನು ಪಡೆಯುವುದಕ್ಕೋಸ್ಕರ ಎಂಥ ದುಷ್ಕೃತ್ಯ ಮಾಡು ವುದಕ್ಕೂ ನಾನು ಹೇಸುತ್ತಿರಲಿಲ್ಲ ; ಮತ್ತೆ ಈಗ, ನನ್ನ ಅದೃಷ್ಟದ ನಕ್ಷತ್ರವು ನ್ಯಾಯಕ್ಕೆ ಕಟ್ಟುಬಿದ್ದು ಕರುಣೆಯಿಂದ ಅದನ್ನು ನನಗೆ ಅನುಗ್ರಹಿಸುತ್ತಿರುವಾಗ, ತನ್ನ ಬೆಳ್ಳಿಯ ಕಿರಣಗಳನ್ನು ಬೀರುವಾಗ, ಸರ್ವನಾಶದ ಸುದ್ದಿಯೆತ್ತು ವೆಯ ! . . . ಓ, ಅನುರಾಗವಿಲ್ಲದ ನತದೃಷ್ಟರು ! . . . ಪ್ರೇಮವನ್ನು ಅರಿ ಯದ ನಿರ್ಭಾಗ್ಯರು ! . . . ಇದೆ ಈಗ, ಈ ಕ್ಷಣದಲ್ಲಿ, ನನ್ನ ಅದೃಷ್ಟವನ್ನು

ಆಕಾಶದಲ್ಲಿ ತೂಕಮಾಡಿ, ಒಂದು ನೂರು ಪ್ರಣಯಿಗಳ ಪಾಲಿನ ಒಂದು ನೂರು ಸಂತೋಷಗಳನ್ನು ನನಗೆ ನೀಡುವರೆಂಬುದನ್ನು ನೀನು ಕಾಣೆಯಾ! . . . ಆಃ, ಇದನ್ನು ನಾನು ಬಲ್ಲೆ! . . . ಮಹತ್ತರವಾದ ಜಯವನ್ನೋ ಅಪಜಯವನ್ನೋ ಪಡೆಯುವ ವಿಧಿಯಿರುವವರು ಇದ್ದಕ್ಕಿದ್ದಂತೆ ತಮ್ಮ ಜೀವನದ ತುತ್ತತುದಿಯ ಶಿಖರವನ್ನು ಮೆಟ್ಟನಿಂತು, ಅಲ್ಲಿನ ಸರ್ವಕ್ಕೂ ಪ್ರಭುಗಳಾಗಿ, ಅಲ್ಲಿ ಎಲ್ಲರ ವಿಧೇಯತೆಯನ್ನು ಕೊಂಡು, ಅಲ್ಲಿನವನ್ನು ಹೇಗೆಂದರೆ ಹಾಗೆ ಆಡಿಸುತ್ತಿರುವುದಿಲ್ಲವೇ—ಅಂತಹ ಗಳಿಗೆ ನನಗೆ ಸನ್ನಿಹಿತ ವಾಗಿದೆ! . . . ಇನ್ನು ಉಳಿದುದನ್ನು, ಆ ಅನಂತರ ಆಗುವುದನ್ನು, ಕಟ್ಟಿ ಕೊಂಡೇನು! . . . ಮನುಷ್ಯನು ಅನುಭವಿಸಲಶಕ್ಯವಾದ ಸುಖಾತಿರೇಕ ವೊಂದುಂಟು, ಅದನ್ನು ಪಡೆದವನು ಅದರ ಭಾರಕ್ಕೆ ಪುಡಿಪುಡಿಯಾಗಿ ಹೋಗುತ್ತಾನೆ! . . .

**ವೀಡಿಯೊ:** (ಬಟ್ಟೆಯ ಪಟ್ಟಿಯನ್ನು ಹಿಡಿದು, ಹತ್ತಿರ ಬಂದು,) ರಕ್ತ ವಿನ್ನೂ ಹರಿಯುತ್ತಿದೆ; ಈ ಪಟ್ಟಿಯನ್ನು ಹಣೆಗೆ ಕಟ್ಟೋಣ.

**ಪ್ರಿನ್‌ಸಿವಲ್ಲೆ:** ಹುಂ, ಆಗಬೇಕಾದ್ದು ಆಗಲಿ . . . ಆದರೆ, ಪಟ್ಟಿಗಳು ನನ್ನ ಕಣ್ಣುಗಳನ್ನು ಮುಚ್ಚದಂತೆ ನೋಡಿಕೊ. (ಕನ್ನಡಿಯಲ್ಲಿ ನೋಡುತ್ತ,) ಆಃ, ತನ್ನ ಪ್ರೇಯಸಿಯನ್ನು ಇಷ್ಟರಲ್ಲಿಯೇ ಸಂತೋಷದಿಂದ ಸ್ವಾಗತಿಸುವ ಪ್ರಿಯ ನಂತೆ ಕಾಣುವುದಕ್ಕಿಂತ ಶಸ್ತ್ರಚಿಕಿತ್ಸಕನ ಅಲಗಿಗೆ ಹೆದರಿಕೊಂಡು ಕುಗ್ಗು ತ್ತಿರುವ ರೋಗಿಯಂತೆ ಕಾಣುತ್ತಿದ್ದೇನೆ! (ಪಟ್ಟಿಯನ್ನು ಓರೆಮಾಡುವನು.) ಮತ್ತೆ ನೀನು, ವೀಡಿಯೊ, ನನ್ನ ನಿರ್ಭಾಗ್ಯ ವೀಡಿಯೊ, ನಿನ್ನ ಗತಿ ಏನಾಗುವುದು?

**ವೀಡಿಯೊ:** ಸ್ವಾಮಿ, ನೀವು ಎಲ್ಲಿಗೆ ಹೋದರೆ ನಾನೂ ಅಲ್ಲಿಗೇ . . .

**ಪ್ರಿನ್‌ಸಿವಲ್ಲೆ:** ಹಾಗಲ್ಲ, ನೀನು ನನ್ನನ್ನು ಬಿಟ್ಟುಹೋಗಬೇಕು . . . ನಾನು ಎಲ್ಲಿಗೆ ಹೋಗುತ್ತೇನೊ, ನನ್ನ ಗತಿ ಏನಾಗುವುದೊ, ನಾನು ಕಾಣೆ . . . ನೀನು ತಪ್ಪಿಸಿಕೊಂಡು ಹೋಗು; ಯಾರೂ ನಿನ್ನ ಬೆನ್ನಟ್ಟಿ ಬರುವುದಿಲ್ಲ; ಅದು ಬಿಟ್ಟು, ನಿನ್ನ ಸ್ವಾಮಿಯ ಸಂಗಡ ಹೋದೆಯೋ . . . ಈ ಪೆಠಾರಿ ಯಲ್ಲಿ ಚಿನ್ನವಿದೆ; ತೆಗೆದುಕೊ, ಅದು ನಿನ್ನದು, ಇನ್ನು ನನಗೆ ಅದರ ಅಗತ್ಯ ವಿಲ್ಲ . . . ಗಾಡಿಗಳು ಸಿದ್ಧವಾಗಿವೆಯೊ, ಮಂದೆಗಳನ್ನು ಹಿಂಡುಕೊಡಿಸಿ ಯಾಯಿತೊ?

**ವೀಡಿಯೊ:** ಗೂಡಾರದ ಮುಂದೆ ಇವೆ.

**ಪ್ರಿನ್ಸಿವಲ್ಲೆ:** ಒಳ್ಳೆಯದು. ನಾನು ಸನ್ನೆಮಾಡಿದಾಗ, ಮಾಡ ಬೇಕಾದ್ದನ್ನು ನೀನು ಮಾಡು. (ಬಂದೂಕದ ಗುಂಡು ಹಾರಿದ ಶಬ್ದ ದೂರದಿಂದ ಕೇಳಿಬರುವುದು.) ಏನದು?

**ವೀಡಿಯೊ:** ಗಡಿಗಳ ಬಳಿ ಗುಂಡು ಹಾರಿಸಿದ್ದಾರೆ.

**ಪ್ರಿನ್ಸಿವಲ್ಲೆ:** ಆಜ್ಞೆ ಮಾಡಿದವರಾರು? . . . ಏನೋ ಅಚಾತುರ್ಯ ವಾಗಿರಬೇಕು . . . ಅವಳ ಮೇಲೆ ಗುಂಡು ಹಾರಿಸಿದ್ದರೆ, ಗತಿ! ನೀನು ಹೇಳಲಿಲ್ಲವೆ . . .

**ವೀಡಿಯೊ:** ಹೇಳಿದ್ದೆ. ಹಾಗಾಗಿರಲಾರದು. ಅವಳು ಬಂದಕೂಡಲೆ ಅವಳನ್ನು ನಿನ್ನ ಬಳಿಗೆ ಕರೆದು ತರಬೇಕೆಂದು ಹಲವು ಕಾವಲಿನವರನ್ನು ಅಲ್ಲಿ ನಿಲ್ಲಿಸಿದ್ದೆ.

**ಪ್ರಿನ್ಸಿವಲ್ಲೆ:** ಹೋಗಿ ನೋಡು. [ವೀಡಿಯೊ ಹೋಗುವನು.

[ಒಂದು ಕ್ಷಣ ಪ್ರಿನ್ಸಿವಲ್ಲೆ ಏಕಾಕಿಯಾಗಿ ನಿಲ್ಲುವನು. ವೀಡಿಯೊ ಹಿಂದಿರುಗುವನು, ದ್ವಾರದ ಬಳಿಯ ತೆರೆಯನ್ನು ಮೇಲೆತ್ತು ವನು, 'ಸ್ವಾಮಿ' ಎಂದು ಮರ್ಮರಿಸುವನು. ಅನಂತರ ಅವನು ಹೋಗುವನು. ಮೊನ್ನ ವನ್ನ, ನೀಳವಾದ ನಿಲುವಂಗಿ ಯಿಂದ ಆವೃತಳಾಗಿ, ಕಾಣಿಸಿಕೊಂಡು, ಹೊಸಲಿನ ಮೇಲೆ ತಡೆದು ನಿಲ್ಲುವಳು. ಪ್ರಿನ್ಸಿವಲ್ಲೆ ನಡುನಡುಗಿ, ಅವಳ ಕಡೆಗೆ ಚಲಿಸುವನು.

**ವನ್ನ:** (ಉಸಿರು ಹಿಡಿದ ಧ್ವನಿಯಲ್ಲಿ,) ನೀನು ಆಜ್ಞೆಮಾಡಿದ ಹಾಗೆ ಬಂದಿದ್ದೇನೆ . . .

**ಪ್ರಿನ್ಸಿವಲ್ಲೆ:** ನಿನ್ನ ಕೈಯ ಮೇಲೆ ರಕ್ತ: ಗಾಯವಾಯಿತೆ? . . .

**ವನ್ನ:** ಒಂದು ಗುಂಡು ನನ್ನ ಹೆಗಲನ್ನು ಮುಟ್ಟಿಹೋಯಿತು . . .

**ಪ್ರಿನ್ಸಿವಲ್ಲೆ:** ಏನು? ಯಾವಾಗ? ಇದು ಘೋರ—

**ವನ್ನ:** ಪಾಳೆಯದ ಹತ್ತಿರ ಬಂದಾಗ.

**ಪ್ರಿನ್ಸಿವಲ್ಲೆ:** ಗುಂಡು ಹಾರಿಸಿದವರು ಯಾರು? . . .

**ವನ್ನ:** ನಾನು ಕಾಣೆ, ಅವನು ತಪ್ಪಿಸಿಕೊಂಡು ಓಡಿದ.

**ಪ್ರಿನ್ಸಿವಲ್ಲೆ:** ನೋವಾಗುತ್ತಿದೆಯೆ? . . .

ವನ್ನ: ಇಲ್ಲ.

ಪ್ರಿನ್ಸಿವಲ್ಲೆ: ಗಾಯಕ್ಕೆ ಪಟ್ಟಿ ಕಟ್ಟಿಸಲೆ?

ವನ್ನ: ಬೇಡ. ಅದೇನೂ ಇಲ್ಲ. [ಒಂದು ಗಳಿಗೆಯ ಮೌನ.

ಪ್ರಿನ್ಸಿವಲ್ಲೆ: ನಿಶ್ಚಯ ಮಾಡಿದ್ದೀಯೊ? . . .

ವನ್ನ: ಹೌದು.

ಪ್ರಿನ್ಸಿವಲ್ಲೆ: ನಿಬಂಧನೆಗಳನ್ನು ಜ್ಞಾಪಿಸಿಕೊಡಲೊ?

ವನ್ನ: ಅಗತ್ಯವಿಲ್ಲ.

ಪ್ರಿನ್ಸಿವಲ್ಲೆ: ವ್ಯಥೆಯೇನೂ ಇಲ್ಲವಷ್ಟೆ? . . .

ವನ್ನ: ವ್ಯಥೆಯಿಲ್ಲದೆ ಬರತಕ್ಕದ್ದೆಂದು ನಿಬಂಧನೆಯಾಗಿತ್ತೇನು?

ಪ್ರಿನ್ಸಿವಲ್ಲೆ: ನಿನ್ನ ಗಂಡ ಒಪ್ಪುತ್ತಾನೊ? . . .

ವನ್ನ: ಹೌದು.

ಪ್ರಿನ್ಸಿವಲ್ಲೆ: ಕೊಟ್ಟ ಮಾತನ್ನು ಬಿಟ್ಟು ಕಳೆಯಲು ಇನ್ನೂ ಅವಕಾಶವುಂಟು . . .

ವನ್ನ: ಬೇಡ.

ಪ್ರಿನ್ಸಿವಲ್ಲೆ: ನೀನು ಇದನ್ನು ಮಾಡುತ್ತಿರುವುದು ಏಕೆ?

ವನ್ನ: ಏಕೆಂದರೆ—ಅದೋ ಅಲ್ಲಿ ಅವರು ಹಸಿವಿನಿಂದ ನಾಶವಾಗುತ್ತಿದ್ದಾರೆ, ನಾಳೆ ಅದಕ್ಕಿಂತ ಶೀಘ್ರದ ಸಾವು ಅವರಿಗಾಗಿ ಕಾದು ಕುಳಿತಿದೆ . . .

ಪ್ರಿನ್ಸಿವಲ್ಲೆ: ಬೇರೆ ಏನೂ ಕಾರಣವಿಲ್ಲವೊ?

ವನ್ನ: ಬೇರೆ ಏನು ಇದ್ದೀತು?

ಪ್ರಿನ್ಸಿವಲ್ಲೆ: ನನಗೆನ್ನಿಸುತ್ತದೆ: ಶೀಲವತಿಯಾದ ಹೆಂಗುಸು . . .

ವನ್ನ: ಹೌದು.

ಪ್ರಿನ್ಸಿವಲ್ಲೆ: ಪತಿಪ್ರಾಣೆಯಾದವಳು . . .

ವನ್ನ: ಹೌದು.

ಪ್ರಿನ್ಸಿವಲ್ಲೆ: ಗಾಢವಾಗಿ?

ವನ್ನ: ಹೌದು.

ಪ್ರಿನ್ಸಿವಲ್ಲೆ: ಧರಿಸಿರುವುದು ನಿಲುವಂಗಿ ಒಂದೇ ತಾನೆ?

ವನ್ನ: ಹೌದು.

**ಪ್ರಿನ್‌ಸಿವಲ್ಲೆ:** ಗುಡಾರದ ಎದುರಿಗೆ ಗಾಡಿಗಳನ್ನೂ ಹಿಂಡುಗಳನ್ನೂ ನೋಡಿದೆಯೇನು ?

**ವನ್ನ:** ಹೌದು.

**ಪ್ರಿನ್‌ಸಿವಲ್ಲೆ:** ಟಸ್ಕನ್‌ಪ್ರಾಂತ್ಯದ ಅತ್ಯುತ್ತಮವಾದ ಗೋಧಿಯನ್ನು ತುಂಬಿದ ಎರಡು ನೂರು ಗಾಡಿಗಳಿವೆ; ಪಶುಪ್ರಾಣಿಗಳ ಮೇವನ್ನು ಹೊತ್ತು ಇನ್ನೊಂದು ಇನ್ನೂರು ಗಾಡಿ; ಸಿಯೆನ್ನಾ ಪ್ರಾಂತ್ಯದ ಹಣ್ಣುಹಂಪಲೂ ಪಾನೀಯಗಳೂ ತುಂಬಿದವು ಇನ್ನು ಕೆಲವು. ಜರ್ಮನಿಯಲ್ಲಿ ತಯಾರಾದ ಮದ್ದು ತುಂಬಿದ ದೊಡ್ಡ ಗಾಡಿ ಮೂವತ್ತು, ಸೀಸ ತುಂಬಿದ ಚಿಕ್ಕ ಗಾಡಿಗಳು ಹದಿನೈದು; ಅವುಗಳ ಸುತ್ತಲೂ ಅಪ್ಯೂಲಿಯಾದಿಂದ ಬಂದ ಆರು ನೂರು ದನಗಳು, ಹನ್ನೆರಡು ನೂರು ಕುರಿ. ನೀನು ಅಪ್ಪಣೆ ಮಾಡಿದೊಡನೆ ಪೀಸಾನಗರಕ್ಕೆ ಹೊರಡುತ್ತವೆ. ಅವು ಹೊರಡುವುದನ್ನು ನೋಡುವ ಅಪೇಕ್ಷೆಯುಂಟೆ ?

**ವನ್ನ:** ಉಂಟು.

**ಪ್ರಿನ್‌ಸಿವಲ್ಲೆ:** ಹಾಗಾದರೆ, ನನ್ನ ಗುಡಾರದ ಬಾಗಿಲ ಬಳಿಗೆ ಬಾ.

[ಕಸೂತಿ ಕೆಲಸ ಮಾಡಿರುವ ತೆರೆಯನ್ನು ಮೇಲೆತ್ತಿ, ಆಜ್ಞೆಯನ್ನು ನಿರೂಪಿಸಿ, ಸನ್ನೆಮಾಡುವನು. ಅಸ್ಪಷ್ಟವಾಗಿ ಒಂದು ಮಹಾ ಚಲನದ ಶಬ್ದ ಕೇಳಿಬರುವುದು. ದೀವಟಿಗೆಗಳನ್ನು ಹಚ್ಚಿ, ಆಚೆಯಿಂದ ಈಚೆಗೆ ಬೀಸುವರು. ಚಾವಟಿಗಳ ಛಟಲೂ ಗಾಡಿಗಳ ಕಿರಿಕೂ ಕೇಳಿಬರುವುದು. ಕುರಿಗಳೂ ಆಕಳೂ ಕೂಗಿದ ಶಬ್ದ. ವನ್ನ ಮತ್ತು ಪ್ರಿನ್‌ಸಿವಲ್ಲೆ, ಗುಡಾರದ ಹೊಸಲ ಬಳಿ ನೆಟ್ಟಗೆ ನಿಂತು, ಆ ದೊಡ್ಡ ಗಾಡಿಯ ಸಾಲು ಹೊರಡುವುದನ್ನು ಒಂದು ಕ್ಷಣ ಗಮನಿಸುವರು. ನಕ್ಷತ್ರ ಖಚಿತವಾದ ಆಕಾಶದಲ್ಲಿ ದೀವಟಿಗೆಗಳು ಬೆಳಗುವುವು.

**ಪ್ರಿನ್‌ಸಿವಲ್ಲೆ:** ನಿನ್ನ ಕೃಪೆಯಿಂದ, ಈ ರಾತ್ರೆ ಮೊದಲಾಗಿ ಪೀಸಾದ ಹಸಿವು ಅಡಗುವುದು. ಈಗ ಅದು ಅಜೇಯ; ನಾಳೆಯಂತೂ, ತಾನು ಯಾವುದರ ಆಸೆಯನ್ನು ಬಿಟ್ಟಿತ್ತೋ ಆ ಸಂತೋಷದ ವಿಜಯದ ವೈಭವವನ್ನು ಮತ್ತೆ ಕಾಣುವುದು . . . ತೃಪ್ತಿಯಾಯಿತೆ ನಿನಗೆ ?

**ವನ್ನ:** ಆಯಿತು.

**ಪ್ರಿನ್ ಸಿವಲ್ಲೆ:** ಹಾಗಾದರೆ, ಗುಡಾರದ ಬಾಗಿಲು ಮುಚ್ಚೋಣ. ಎಲ್ಲಿ, ನಿನ್ನ ಕೈ ತಾ. ಸಾಯಂಕಾಲ ಸುಖೋಷ್ಣವಾಗಿದ್ದರೂ ರಾತ್ರಿ ಚಳಿಯಾಗುವುದು. ಯಾವ ಆಯುಧಗಳನ್ನಾಗಲಿ ವಿಷವನ್ನಾಗಲಿ ಬಚ್ಚಿಟ್ಟುಕೊಂಡಿಲ್ಲ ತಾನೆ?

**ವನ್ನ:** ನನ್ನ ಪಾದರಕ್ಷೆಗಳು, ಈ ನಿಲುವಂಗಿ, ಇಷ್ಟು ಮಾತ್ರ . . . ಹೆದರಿಕೆಯಾದರೆ, ಹುಡುಕಿಕೊಳ್ಳಬಹುದು . . .

**ಪ್ರಿನ್ ಸಿವಲ್ಲೆ:** ಹೆದರಿಕೆ ನನಗಾಗಿಯಲ್ಲ, ನಿನಗಾಗಿ . . .

**ವನ್ನ:** ಎಲ್ಲಕ್ಕಿಂತ ಮಿಗಿಲಾದದ್ದು ನನ್ನ ಜನರ ಪ್ರಾಣ . . .

**ಪ್ರಿನ್ ಸಿವಲ್ಲೆ:** ಒಳ್ಳೆಯದು, ಸರಿಯಾದದ್ದೆ ಮಾಡಿದೆ . . . ಬಾ, ಇಲ್ಲಿ ಕುಳಿತುಕೊ . . . ಇದು ಯೋಧನ ಮಂಚ, ಕರ್ಕಶವಾದದ್ದು, ಕಠೋರವಾದದ್ದು, ಸಮಾಧಿಯಂತೆ ಇಕ್ಕಟ್ಟಾದುದು, ನಿನಗೆ ತಕ್ಕದ್ದಲ್ಲ ಇದು. ಮಹಿಳೆಯ ಕೋಮಲವಾದ ಸ್ಪರ್ಶವನ್ನು ಇದುವರೆಗೂ ಕಂಡರಿಯದ ಈ ಹುಲಿಯ ಚರ್ಮಗಳ ಮೇಲೆ, ಇಲ್ಲಿ ಕುಳಿತುಕೊ . . . ಈ ಮೃದುವಾದ ಕೂದಲಿನ ಚರ್ಮವನ್ನು ಕಾಲ ಬಳಿ ಹಾಕಿಕೊ . . . ಇದು 'ಲಿಂಕ್ಸ್' ಎಂಬ ಪ್ರಾಣಿಯ ಚರ್ಮ, ನಾನು ಗೆದ್ದಾಗ ಒಂದು ರಾತ್ರಿ ಆಫ್ರಿಕದ ದೊರೆಯೊಬ್ಬ ಕೊಟ್ಟದ್ದು . . .

[ವನ್ನ ತನ್ನ ನಿಲುವಂಗಿಯನ್ನು ಬಿಗುವಾಗಿ ಮೈಸುತ್ತ ಎಳೆದುಕೊಂಡು ಕುಳ್ಳಿರುವಳು.

**ಪ್ರಿನ್ ಸಿವಲ್ಲೆ:** ದೀಪದ ಬೆಳಕು ನಿನ್ನ ಕಣ್ಣುಗಳ ಮೇಲೆ ಬೀಳುತ್ತಿವೆ; ಅದನ್ನು ಓರೆಮಾಡಲೆ?

**ವನ್ನ:** ಚಿಂತೆಯಿಲ್ಲ . . .

**ಪ್ರಿನ್ ಸಿವಲ್ಲೆ:** (ಮಂಚದ ಕಾಲಿನ ಬಳಿ ಮಂಡಿಯೂರಿ, ವನ್ನಳ ಕೈಯನ್ನು ಬಿಗಿಹಿಡಿದು,) ಗಯೋವನ್ನ! . . . (ವನ್ನ ಚಕಿತಳಾಗಿ ಎದ್ದು, ಅವನ ಕಡೆ ನೋಡುವಳು.) ಓ, ವನ್ನ, ನನ್ನ ವನ್ನ! . . . ನಾನು ಕೂಡ ನಿನ್ನನ್ನು ಹೀಗೇ ಕರೆಯುತ್ತಿದ್ದೆ . . . ಈಗ ನಿನ್ನ ಹೆಸರು ಹೇಳುವಾಗ ನಡುಕ ಬರುತ್ತದೆ . . . ಇಷ್ಟು ದೀರ್ಘಕಾಲ ನನ್ನ ಹೃದಯದಲ್ಲಿ ಮೂರುಸಲ ಮುದ್ರೆಯಾಗಿದ್ದುದು ಅದು, ಈಗ ಹೊರಗೆ ಬರಬೇಕಾದರೆ ತನ್ನ ಸೆರೆಮನೆಯನ್ನೇ ಭೇದಿಸಿಕೊಂಡು ಬರಬೇಕು . . . ದಿಟವಾಗಿಯೂ, ಅದು ನನ್ನ ಹೃದಯ, ಅದು ನನ್ನ ಸರ್ವಸ್ವ . . .

ಅದರ ಪ್ರತಿಯೊಂದು ಅಕ್ಷರದಲ್ಲೂ ನನ್ನ ಪ್ರಾಣ ಅಡಗಿದೆ, ಆ ನಾಮಾ ಕ್ಷರಗಳನ್ನು ಉಚ್ಚರಿಸುವಾಗ ನನ್ನ ಪ್ರಾಣವೇ ಹೊರಕ್ಕೆ ಹರಿದಂತೆ ಆಗುವುದು . . . ಅದು ನನಗೆ ಪರಿಚಿತವಾಗಿತ್ತು, ನನಗದು ಗೊತ್ತು, ಎಂದುಕೊಂಡಿದ್ದೆ; ಅದನ್ನು ಮತ್ತೆ ಮತ್ತೆ ನನಗೆ ನಾನೇ ಹೇಳಿಕೊಂಡು, ನನ್ನ ಅಳುಕನ್ನು ಕಳೆದು ಕೊಂಡೆ: ಪ್ರೇಮದ ಒಂದು ಮಹಾಮಂತ್ರದಂತೆ ಅದನ್ನು ಪ್ರತಿದಿನದ ಪ್ರತಿ ಗಂಟೆಯೂ ಪಠಿಸಿದ್ದೆ; ಎಷ್ಟು ಪಠಿಸಿದರೂ ವ್ಯರ್ಥವಾಗಿ ಪ್ರತ್ಯಕ್ಷವಾಗದಿದ್ದ ಅವಳೆದುರಿಗೆ, ಒಂದು ಸಲವಾದರೂ ಸಾಕು, ಅದನ್ನು ಉಚ್ಚರಿಸಬೇಕೆಂದು ಹಾತೊರೆಯುತ್ತಿದ್ದೆ . . . ಆ ಹೆಸರಿನ ಆಕಾರಕ್ಕೆ ತಕ್ಕಂತೆ ನನ್ನ ತುಟಿಗಳು ಹೊಂದಿವೆಯೆಂದುಕೊಂಡಿದ್ದೆ; ಅಷ್ಟು ಕಾಲದಿಂದ ನಿರೀಕ್ಷಿಸುತ್ತಿದ್ದ ಆ ಗಳಿಗೆ ಬಂದಾಗ, ಅವು ಅದನ್ನು ಮೃದುವಾಗಿ ನಮ್ರವಾಗಿ ದೈನ್ಯದಿಂದ ಉಚ್ಚರಿಸುವ ರೀತಿಯಲ್ಲಿಯೇ ನನ್ನ ಅಗಾಧವಾದ ಅತಿಶಯವಾದ ಹಂಬಲವು ಪ್ರಕಟವಾಗಿ, ಅದನ್ನು ಕೇಳಿದವಳಿಗೆ ಅದರೊಳಗಿನ ಪ್ರೇಮವೂ ಯಾತನೆಯೂ ತಿಳಿಯುತ್ತದೆ, ಎಂದುಕೊಂಡಿದ್ದೆ . . . ಆದರೆ, ಅದರ ಬದಲು, ಈಹೊತ್ತು ಅದು ಬರಿಯ ನೆರಳು ಮಾತ್ರವಾಯಿತು . . . ಈಗ ಮೊದಲಿನಂತಿಲ್ಲ . . . ನನ್ನ ಕಳವಳ ಗಳೂ ದುಃಖಗಳೂ ಅದನ್ನು ಹಿಂಡಿ ಹಿಸುಕಿ ಅಮುಕಿ ಗಾಸಿಪಡಿಸಿ, ನನ್ನ ತುಟಿ ಯಿಂದ ಬಂದುದನ್ನು ನಾನೇ ಗುರುತಿಸಲಾರೆ. ಅದರೊಳಗೆ ನಾನು ಇರಿಸಿರುವ ಅರ್ಥ ಆರಾಧನೆ ಎಲ್ಲವೂ ಈಗ ಬಂದು, ನನ್ನ ಶಕ್ತಿಯನ್ನು ಕುಗ್ಗಿಸುತ್ತಿವೆ, ನನ್ನ ಧ್ವನಿಯನ್ನು ತಗ್ಗಿಸುತ್ತಿವೆ.

**ವನ್ನ**: ಯಾರು ನೀನು?

**ಪ್ರಿನ್ಸಿವಲ್ಲೆ**: ಜ್ಞಾಪಕವಿಲ್ಲವೆ, ನಿನಗೆ? . . . ನನ್ನನ್ನು ನೋಡಿ, ಯಾವ ನೆನಪೂ ಆಗದೆ? . . . ಆಃ, ಕಾಲವು ಎಂಥೆಂಥ ಅತಿಶಯಗಳನ್ನು ಅಳಿಸಿಬಿಡುತ್ತದೊ! . . . ನಿಜವೇ, ಆ ಅತಿಶಯಗಳನ್ನು ಕಂಡಿದ್ದವನು ನಾನೊ ಬ್ಬನೇ . . . ಬಹುಶಃ, ಅವುಗಳನ್ನು ಮರೆಯುವುದೇ ವಾಸಿ . . . ಇನ್ನು ಆಶೆ ಪಡುವಂತಿಲ್ಲ, ಪರಿತಾಪವಾದರೂ ಕಡಿಮೆಯಾದೀತು! . . . ಇಲ್ಲ, ನಿನ್ನ ಪಾಲಿಗೆ ನಾನು ಶೂನ್ಯ . . . ಯಾವುದು ತನ್ನ ಸರ್ವಜೀವನದ ಧ್ಯೇಯ ವಾಗಿತ್ತೋ ಅದರ ಕಡೆಗೆ ಒಂದೇ ಒಂದು ಕ್ಷಣ ಹಾತೊರೆದು ನಿಟ್ಟಿಸುವ ಬಡಪಾಯಿ ನಾನು; ಈ ನಿರ್ಭಾಗ್ಯನು ಏನನ್ನೂ ಕೇಳುವುದಿಲ್ಲ, ಏನನ್ನು ಕೇಳ

ಬೇಕೆಂಬುದು ಕೂಡ ನನಗೆ ತಿಳಿಯದು; ಆದರೂ, ನೀನು ಹೊರಟುಹೋಗುವ ಮುಂಚೆ, ನನ್ನ ಭಾಗಕ್ಕೆ ನೀನೇನಾಗಿರುವೆ ಎಂಬುದನ್ನು, ನನ್ನ ಜೀವವಿರುವ ವರೆಗೂ ಇನ್ನೂ ಏನಾಗಿರುವೆ ಎಂಬುದನ್ನು, ನನಗೆ ಸಾಧ್ಯವಾದರೆ, ನಿನಗೆ ತಿಳಿಸಬೇಕೆಂಬ ಇಷ್ಟವುಂಟು . . .

**ವನ್ನ:** ಹಾಗಾದರೆ, ನನ್ನನ್ನು ಬಲ್ಲೆಯ! . . . ಯಾರು ನೀನು ? . . .

**ಪ್ರಿನ್ಸಿವಲ್ಲೆ:** ಕಿನ್ನರ ಪ್ರಪಂಚದಲ್ಲಿ, ತನ್ನ ಸುಖ ಸಂತೋಷಗಳ ಮೂಲಸ್ಥಾನವನ್ನು ಕುರಿತು ನೋಡುವಂತೆ ಈಗ ನಿನ್ನನ್ನು ನೋಡುತ್ತಿರುವ ನನ್ನ ನೆನಪಿಲ್ಲವೆ ನಿನಗೆ ?

**ವನ್ನ:** ಇಲ್ಲ . . . ಇದ್ದಂತೆಯೂ ಕಾಣೆ . . .

**ಪ್ರಿನ್ಸಿವಲ್ಲೆ:** ಹೌದು, ನೀನು ಮರೆತಿದ್ದೀಯೆ . . . ನೀನು ಮರೆತು ಬಿಟ್ಟಿರುತ್ತೀಯೆಂದು ನನಗೆ ಖಂಡಿತವಾಗಿತ್ತು! . . . ನಾನು ನಿನ್ನನ್ನು ಮೊದಲು ನೋಡಿದಾಗ ನಿನಗೆ ಎಂಟು ವರ್ಷ, ನನಗೆ ಹನ್ನೆರಡು . . .

**ವನ್ನ:** ಎಲ್ಲಿ ?

**ಪ್ರಿನ್ಸಿವಲ್ಲೆ:** ವೆನಿಸ್ ನಗರದಲ್ಲಿ, ಜೂನ್ ತಿಂಗಳಿನ ಒಂದು ಭಾನು ವಾರ . . . ನನ್ನ ತಂದೆ, ಆ ಮುದಿಯ ಅಕ್ಕಸಾಲೆ, ನಿಮ್ಮ ತಾಯಿಗೆ ಒಂದು ಮುತ್ತಿನ ಹಾರವನ್ನು ತಂದುಕೊಟ್ಟ. ಅವಳು ಆ ಹಾರವನ್ನು ಮೆಚ್ಚಿಕೊಳ್ಳು ತ್ತಿದ್ದಾಗ—ನಾನು ತೋಟದೊಳಕ್ಕೆ ಅಲೆಯುತ್ತ ಬಂದೆ . . . ಅಲ್ಲಿ ನಿನ್ನನ್ನು ಕಂಡೆ, ಒಂದು ಕೊಳದ ದಡದಲ್ಲಿ, ಲತಾಕುಂಜದ ನಡುವೆ. ಒಂದು ಚಿಕ್ಕ ಚಿನ್ನದ ಉಂಗುರ ನೀರಿನೊಳಗೆ ಬಿದ್ದಿತ್ತು . . . ನೀನು ದಡದಲ್ಲಿ ಅಳುತ್ತಿದ್ದೆ . . . ನಾನು ಕೊಳದೊಳಕ್ಕೆ ಹಾರಿದೆ . . . ಉಂಗುರವು ಅಮೃತಶಿಲೆಯ ಹಾಸುಕಲ್ಲಿನ ಮೇಲೆ ಥಳಥಳಿಸುತ್ತಿತ್ತು ; ನಾನು ಅದನ್ನು ತಂದು, ನಿನ್ನ ಬೆರಳಿಗೆ ತೊಡಿಸಿದೆ . . . ಇನ್ನೇನು ನಾನು ಮುಳುಗಿಯೇ ಹೋಗುತ್ತಿದ್ದೆ . . . ನೀನು ನನಗೊಂದು ಮುತ್ತು ಕೊಟ್ಟೆ, ನಿನಗೆ ಸಂತೋಷವಾಗಿತ್ತು . . .

**ವನ್ನ:** ಅದೊಂದು ಚೆಲುವಾದ ತಲೆಗೂದಲಿನ ಮಗು, ಗಯಾನೆಲ್ಲೊ ಎಂದು ಹೆಸರು. ನೀನು ಗಯಾನೆಲ್ಲೊ ಏನು ?

**ಪ್ರಿನ್ಸಿವಲ್ಲೆ:** ಹೌದು.

**ವನ್ನ:** ಯಾರು ನಿನ್ನ ಗುರುತು ಹಿಡಿಯಲಾದೀತು ? . . . ಅಲ್ಲದೆ,

ನಿನ್ನ ಮುಖವೆಲ್ಲ ಪಟ್ಟಿಗಳಿಂದ ಮುಚ್ಚಿಹೋಗಿದೆ . . . ನಿನ್ನ ಕಣ್ಣು ಮಾತ್ರ ಕಾಣಿಸುತ್ತಿದೆ . . .

**ಪ್ರಿನ್‌ಸಿವಲ್ಲೆ**: (ಪಟ್ಟಿಗಳನ್ನು ಸರಿಸಿ,) ಇದನ್ನು ಸರಿಸಿದ ಮೇಲೆ, ನನ್ನ ಗುರುತು ನಿನಗಾಗುವುದೆ ?

**ವನ್ನ**: ಆಗಬಹುದು, ಬಹುಶಃ . . . ಹಾಗೆಯೇ ತೋರುತ್ತದೆ . . . ನಿನ್ನ ನಗು ಇನ್ನೂ ಮಗುವಿನ ನಗುವಿನಂತೆಯೇ ಇದೆ . . . ಅದು ಸರಿ, ನಿನಗೆ ಗಾಯವಾಗಿದೆ, ರಕ್ತ ಹರಿಯುತ್ತಿದೆ . . .

**ಪ್ರಿನ್‌ಸಿವಲ್ಲೆ**: ಆಃ, ನನಗೆ ಗಾಯವಾದದ್ದು ಇದೇ ಮೊದಲನೆಯ ಸಲವಲ್ಲ . . . ಆದರೆ, ನಿನ್ನನ್ನು ಯಾರಾದರೂ ಗಾಯಗೊಳಿಸುವುದೆಂದರೆ . . .

**ವನ್ನ**: ನಿನ್ನ ಪಟ್ಟಿಗಳನ್ನು ಸರಿಪಡಿಸುತ್ತೇನೆ, ತಾಳು; ಕಟ್ಟಿರುವುದು ಸರಿಯಿಲ್ಲ. (ಅವನ ಕೆನ್ನೆಯ ಸುತ್ತ ಪಟ್ಟಿಯನ್ನು ಸುತ್ತುವಳು.) ಈ ಯುದ್ಧದಲ್ಲಿ ಗಾಯಗೊಂಡವರಿಗೆ ಅನೇಕ ವೇಳೆ ಉಪಚರಿಸಿದ್ದೇನೆ . . . ಹೌದು, ಹೌದು, ನೆನಪಾಗುತ್ತದೆ . . . ಆ ತೋಟವನ್ನು ಪುನಃ ಕಾಣಬಲ್ಲೆ, ಆ ದಾಳಿಂಬರ, ಆ ಗುಲಾಬಿ, ಗೊಂಚಲು ಗೊಂಚಲು ಹೂಬಿಟ್ಟ ಆ ಗೋರಂಟಿ ಗಿಡಗಳ ಸಹಿತವಾಗಿ. ಅಲ್ಲಿ, ಎಷ್ಟೋ ಮಧ್ಯಾಹ್ನ, ಸೂರ್ಯನ ಬಿಸಿಲು ಮರಳಿನ ಮೇಲೆ ಕಾಯುತ್ತಿರುವಾಗ, ನಾವು ಆಟವಾಡಿದೆವಲ್ಲ . . .

**ಪ್ರಿನ್‌ಸಿವಲ್ಲೆ**: ಒಟ್ಟು ಹನ್ನೆರಡು ಸಾರಿ—ನಾನು ಲೆಕ್ಕವಿಟ್ಟಿದ್ದೆ . . . ನಾವು ಆಡಿದ ಒಂದೊಂದು ಆಟವನ್ನೂ, ನೀನು ಹೇಳಿದ ಒಂದೊಂದು ಮಾತನ್ನೂ ನಾನು ಬೇಕಾದರೆ ಹೇಳಬಲ್ಲೆ . . .

**ವನ್ನ**: ಆಗ, ಒಂದು ದಿನ, ಈಗ ಜ್ಞಾಪಕವಾಗುತ್ತದೆ, ನಾನು ನಿನಗಾಗಿ ಕಾದುಕೊಂಡಿದ್ದೆ—ಆಗ ನೀನು ಅಷ್ಟು ಗಂಭೀರವಾಗಿ, ಅಷ್ಟು ಬಿಗುಮಾನದಿಂದ, ನನ್ನನ್ನು ಒಂದು ಪುಟ್ಟ ರಾಣಿಯಂತೆ ನಡಸಿಕೊಂಡದ್ದರಿಂದ ನಿನ್ನನ್ನು ಕಂಡರೆ ನನಗೆ ತುಂಬ ವಿಶ್ವಾಸವಿತ್ತು . . . ಆದರೆ ನೀನು ಹಿಂದಿರುಗಿ ಬರಲೇ ಇಲ್ಲ.

**ಪ್ರಿನ್‌ಸಿವಲ್ಲೆ**: ನನ್ನ ತಂದೆಯು ನನ್ನನ್ನು ಆಫ್ರಿಕಕ್ಕೆ ಕರೆದೊಯ್ದನು . . . ಅಲ್ಲಿ ನಾವು ಮರುಭೂಮಿಯಲ್ಲಿ ದಾರಿ ತಪ್ಪಿದೆವು . . . ಅಲ್ಲಿ ಅರಬರು, ತುರ್ಕಿಯವರು, ಸ್ಪೆಯಿನ್ ದೇಶದವರು ನನ್ನನ್ನು ಸೆರೆಹಿಡಿದರು—

ಅದು ನನ್ನ ಬದುಕಾಯಿತು. ನಾನು ಪುನಃ ವೆನಿಸನ್ನು ಕಂಡಾಗ ನಿನ್ನ ತಾಯಿ ತೀರಿಕೊಂಡಿದ್ದಳು; ತೋಟ ಪಾಳುಬಿದ್ದಿತ್ತು . . . ನಾನು ನಿನಗಾಗಿ ಹುಡುಕಿದ್ದು ವ್ಯರ್ಥವಾಯಿತು . . . ಕಟ್ಟಕಡೆಗೆ, ನಿನ್ನ ಸುದ್ದಿಯನ್ನು ಕೇಳಿದೆ. ಅದಕ್ಕೆ ನಿನ್ನ ಸೌಂದರ್ಯವೇ ಕಾರಣ. ಒಮ್ಮೆ ಅದನ್ನು ಕಂಡವನು ಮತ್ತೆ ಅದನ್ನು ಮರೆಯುವುದು ಶಕ್ಯವಿಲ್ಲ . . .

**ವನ್ನ**: ನಾನು ಒಳಗೆ ಬಂದ ಒಡನೆ ನನ್ನ ಗುರುತಾಯಿತೊ ನಿನಗೆ?

**ಪ್ರಿನ್ಸಿವಲ್ಲೆ**: ಹತ್ತು ಸಾವಿರ ಹೆಂಗುಸರು, ಪ್ರತಿಯೊಬ್ಬರ ಮುಖವೂ ನಿನ್ನ ಮುಖದಂತೆ, ಒಂದೇ ವಿಧದ ವಸ್ತ್ರವುಟ್ಟು, ಒಂದೇ ರೀತಿಯ ಸೌಂದರ್ಯದಿಂದ, ತಮ್ಮ ಒಡಹುಟ್ಟಿದವರಿಗೇ ಗುರುತು ಆಗದಂಥ ಹತ್ತು ಸಾವಿರ ಅಕ್ಕತಂಗಿಯರು ನನ್ನ ಗುಡಾರದೊಳಕ್ಕೆ ಬಂದಿದ್ದರೂ ನಾನು ಆಕ್ಷಣವೇ ಎದ್ದು, ನಿನ್ನ ಕೈಯನ್ನು ಹಿಡಿದು "ಇವಳೇ ಅವಳು" ಎಂದೆನ್ನುತ್ತಿದ್ದೆ . . . ನಾವು ಪ್ರೀತಿಸುವವರ ಪ್ರತಿಮೆಯು ಈ ರೀತಿಯಾಗಿ ನಮ್ಮ ಹೃದಯದಲ್ಲಿ ನಿಲ್ಲುತ್ತದೆಂಬುದು ಇದು ವಿಚಿತ್ರವಲ್ಲವೆ! ನನ್ನ ಹೃದಯಪಲ್ಲಾದರೂ ನಿನ್ನ ಮೂರ್ತಿಯು ಎಷ್ಟು ಗಾಢವಾಗಿ ನೆಲಸಿತೆಂದರೆ, ಅದು ಬೆಳೆಯಿತು, ಬದಲಾಯಿತು . . . ನೆನ್ನೆ ಇದ್ದುದಕ್ಕಿಂತ ಈಹೊತ್ತು ಬೇರೆಯಾಯಿತು, ಅರಳಿತು, ಇನ್ನಷ್ಟು ಸುಂದರವಾಯಿತು; ವಯಸ್ಸು ಆದಂತೆಲ್ಲ ಬೆಳೆಯುವ ಮಗುವಿನ ಪಾಲಿಗೆ ಬರುವ ಸೌಭಾಗ್ಯಗಳೆಲ್ಲವೂ ನಿನಗೆ ಶೃಂಗಾರವಾದುವು . . . ಆದರೂ, ನಿನ್ನನ್ನು ಪುನಃ ನೋಡಿದಾಗ, ನನ್ನ ಕಣ್ಣುಗಳನ್ನೇ ನಾನು ನಂಬಲಾರದೆ ಹೋದೆ . . . ನಿನ್ನ ಸೌಂದರ್ಯವನ್ನು ಅಷ್ಟು ಯಥಾವತ್ತಾಗಿ ಭಂಡಾರಿಸಿಕೊಂಡಿದ್ದ ನನ್ನ ಸ್ಮೃತಿಯು ತುಂಬ ಸಂಕೋಚಪಟ್ಟುಕೊಂಡು, ಹಿಂದೆ ಹಿಂದೆ ನಿಂತಿತು; ಫಳ್ಳನೆ ನನ್ನ ದೃಷ್ಟಿಗೆ ಮಿಂಚಿದ ಈ ಎಲ್ಲ ಶೋಭಾವೈಭವವನ್ನು ನಿನಗೆ ವಹಿಸಲು ಅದಕ್ಕೆ ಧೈರ್ಯವಾಗಿರಲಿಲ್ಲ. ಮುಚ್ಚಂಜೆಯ ಹೊತ್ತಿನಲ್ಲಿ ತೋಟವನ್ನು ಹಾದುಹೋಗುವಾಗ ಒಮ್ಮೆ ನೋಡಿದ ಹೂವನ್ನು ಜ್ಞಾಪಕವಿರಿಸಿಕೊಂಡಿರುವವನು, ತಟಕ್ಕನೆ ಸೂರ್ಯನ ಪ್ರಭೆಯಲ್ಲಿ ಒಂದು ನೂರು ಸಾವಿರ ಹೂಗಳನ್ನು ಕಂಡ ಹಾಗೆ—ಹಾಗಾಯಿತು ನನ್ನ ಸ್ಥಿತಿ . . . ನೀನು ಒಳಗೆ ಬಂದೆ, ನನಗೆ ಚೆನ್ನಾಗಿ ಪರಿಚಿತವಾದ ಆ ಹುಬ್ಬು, ತಲೆಗೂದಲು, ಆ ಕಣ್ಣು, ಇವುಗಳನ್ನು ಮತ್ತೆ ಕಂಡೆ; ನಾನು ಆರಾಧಿಸಿದ ಮುಖದಲ್ಲಿ ಆತ್ಮವನ್ನು

ಕಂಡೆ . . . ಆದರೆ ನಾನು ದಿನಗಟ್ಟಲೆಯಾಗಿ, ಮಾಸಮಾಸವೂ, ವರ್ಷಾಂತರ ದಿಂದ ಮೌನವಾಗಿ ಶೇಖರಿಸಿಡುತ್ತಿದ್ದ ನಿನ್ನ ಸೌಂದರ್ಯವು ಈ ಇದರ ಮುಂದೆ ಕುಬ್ಜವಾಗಿಹೋಯಿತು. ಕುಂಟುವ ನೆನಪಿನಿಂದ ಪುಷ್ಟವಾದ ಸೌಂದರ್ಯವು ಈ ಸಹಜಸೌಂದರ್ಯಕ್ಕಿಂತ ಅಗಾಧವಾದ ಅಂತರಾಳದಷ್ಟು ಕೆಳಗೆ . . .

**ವನ್ನ**: ಆ ವಯಸ್ಸಿನವರು ಪ್ರೀತಿಸುವಂತೆ ನೀನು ನನ್ನನ್ನು ಪ್ರೀತಿಸಿದೆ; ಆದರೆ, ಒಬ್ಬರನ್ನೊಬ್ಬರು ಕಾಣದ್ದರಿಂದ, ಕಾಲಕ್ರಮೇಣ ಆ ಪ್ರೀತಿಗೆ ಒಂದು ಇಲ್ಲದ ಮೆರುಗು ಬಂದಿರಬೇಕು . . .

**ಪ್ರಿನ್‌ಸಿವಲ್ಲೆ**: ಜನರು, ತಾವು ಒಮ್ಮೆ ಮಾತ್ರ ಪ್ರೀತಿಸಿರುವುದಾಗಿ ಅನೇಕ ವೇಳೆ ಹೇಳಿಕೊಳ್ಳುವರಾದರೂ, ಆ ಮಾತು ನಿಜವಾಗಿರುವುದು ವಿರಳ . . . ತಮ್ಮ ತಾತ್ಸಾರವನ್ನೋ ಅಥವಾ ತಮ್ಮ ತೀವ್ರಾಸಕ್ತಿಯನ್ನೋ ಮರೆ ಮಾಚುವುದಕ್ಕಾಗಿ, ಅವರು, ಒಬ್ಬ ಹೆಂಗಸಿನ ಪ್ರೀತಿಗೋಸ್ಕರವಾಗಿಯೇ ಜನ್ಮತಾಳಿದವರ ಅದ್ಭುತವಾದ ದುಃಖವನ್ನು ತಮ್ಮ ಪಾಲಿಗೆ ಕೋರುವರು; ಮತ್ತೆ, ಅವರಲ್ಲಿ ಒಬ್ಬನು, ತನ್ನ ಬದುಕಿಗೆ ಸುಕ್ಕುಹಿಡಿಸಿರುವ ಆ ದಾರುಣ ವಾದ ಘನಸತ್ಯವನ್ನು ಕುರಿತು ಮಾತನಾಡಲು ಯತ್ನಿಸಿದಾಗ, ಆ ಭಾಗ್ಯ ವಂತ ಪ್ರಣಯಿಗಳು ಹಿಂದೆ ಧಾರಾಳವಾಗಿ ಬಳಸಿದ ಮಾತುಗಳೆಲ್ಲ ತಮ್ಮ ಸತ್ತ್ವವನ್ನು, ತಮ್ಮ ಘನತೆಯನ್ನು ಕಳೆದುಕೊಂಡಿರುತ್ತವೆ. ಅದನ್ನು ಕೇಳಿದವಳು, ಅನೇಕ ವೇಳೆ ದುಃಖದಿಂದ ತುಂಬಿದ ಆ ಪವಿತ್ರವಾದ ಮಾತು ಗಳನ್ನು, ಗಂಡಸರಲ್ಲಿ ಬಹುಜನರು ಅರ್ಥಮಾಡಿಕೊಳ್ಳುವ ಕ್ಷುದ್ರವಾದ ಹುಡುಗಾಟದ ಮಟ್ಟಕ್ಕೆ, ಏನೂ ಯೋಚಿಸದೆಯೆ, ಇಳಿಸಿಬಿಡುತ್ತಾಳೆ . . .

**ವನ್ನ**: ನಾನು ಹಾಗೆ ಮಾಡುವುದಿಲ್ಲ. ನಮ್ಮ ಜೀವನದ ಆರಂಭ ಕಾಲದಲ್ಲಿ ನಾವೆಲ್ಲರೂ ಬಯಸಿ ಹಂಬಲಿಸುವ ಪ್ರೀತಿಯನ್ನು ನಾನು ಅರ್ಥ ಮಾಡಿಕೊಳ್ಳಬಲ್ಲೆ; ನನಗೆ ಹೆಚ್ಚು ವಯಸ್ಸಾಗಿಲ್ಲದಿದ್ದರೂ—ವಯಸ್ಸಾದಂತೆ ಅನೇಕ ವಿಷಯಗಳು ಕೊನೆಗಾಣುತ್ತವೆ ಎಂಬ ಕಾರಣದಿಂದ ನಾವು ಪರಿತ್ಯಜಿ ಸುವ ಪ್ರೇಮವನ್ನು ನಾನು ಅರ್ಥಮಾಡಿಕೊಳ್ಳಬಲ್ಲೆ . . . ಆದರೆ, ಹೇಳು, ನೀನು ಪುನಃ ವೆನಿಸಿನಲ್ಲಿ ಹಾದುಹೋದಾಗ, ಅಲ್ಲಿ ನನ್ನ ಸುಳಿವು ನಿನಗೆ ಸಿಕ್ಕದೆಹೋದಾಗ,—ಆಗ ಏನಾಯಿತು, ಹೇಳು? ನೀನು ಅಷ್ಟು ಗಾಢವಾಗಿ ಪ್ರೀತಿಸಿದ್ದ ಹೆಣ್ಣನ್ನು ನೋಡಲು ನೀನು ಏನೂ ಪ್ರಯತ್ನಿಸಲಿಲ್ಲವೆ? . . .

**ಪ್ರಿನ್ಸಿವಲ್ಲೆ :** ವೆನಿಸಿನಲ್ಲಿ ನನಗೆ ತಿಳಿದುಬಂತು : ನಿನ್ನ ತಾಯಿ ತೀರಿಕೊಂಡಿದ್ದಳೆಂದು, ಅವಳ ಭಾಗ್ಯವೆಲ್ಲ ನಷ್ಟವಾಗಿತ್ತೆಂದು, ಟಸ್ಕನಿಯ ಕುಲೀನನೊಬ್ಬನನ್ನು ನೀನು ಮದುವೆಯಾಗಲಿದ್ದೆಯೆಂದು, ಅವನು ಪೀಸಾ ದಲ್ಲೆಲ್ಲ ಅತ್ಯಂತ ಧನಾಢ್ಯನೆಂದು, ಸಮರ್ಥನೆಂದು, ಅವನಿಗೆ ರಾಣಿಯಾಗಿ ಪುರಸ್ಕಾರಹೊಂದಿ ಸುಖವಾಗಿರುವೆಯೆಂದು . . . ನಾನಾದರೋ ಮನೆಯಿಲ್ಲದೆ, ದೇಶವಿಲ್ಲದೆ, ಎಲ್ಲಿ ಸಾಹಸವೆಂದರೆ ಅಲ್ಲಿ ಅಲೆಯುತ್ತಿದ್ದವನು—ನಾನು ನಿನಗೆ ಏನು ನೀಡಬಲ್ಲವನಾಗಿದ್ದೆ? . . . ಅದೃಷ್ಟವು ನನ್ನ ಪ್ರೇಮವನ್ನು ನಾನು ಬಲಿ ಗೊಡಬೇಕೆಂದು ವಿಧಿಸಿತ್ತು, ಮನಸ್ಸಿಲ್ಲದ ಮನಸ್ಸಿನಿಂದ ಅದಕ್ಕೆ ಒಪ್ಪಿದೆ. ಆಃ, ಎಷ್ಟು ಸಲ ಈ ನಗರದ ಕೋಟೆಯ ಸುತ್ತ ಅಲೆದಿರುವೆನೊ! ನಿನ್ನನ್ನು ನೋಡ ಬೇಕೆಂಬ ಗೀಳು ತಡೆಯಲಸಾಧ್ಯವಾಗಿ, ಎಲ್ಲಿ ನಿನ್ನ ಪ್ರಣಯವನ್ನೂ ಸುಖ ವನ್ನೂ ಕಲಕಿಬಿಡುವೆನೋ ಎಂದು ಹೆದರಿಕೊಂಡು, ಎಷ್ಟು ಸಲ ಆ ದಿಡ್ಡಿ ಬಾಗಿಲ ಸಂಕಲೆಗಳಿಗೆ ಅಂಟಿಬಿದ್ದಿರುವೆನೊ! ಪರರ ಸೇವೆಗೆ ನನ್ನ ಖಡ್ಗವನ್ನು ಒಪ್ಪಿಸಿ, ಎರಡು ಮೂರು ಯುದ್ಧಗಳಲ್ಲಿ ತೊಡಗಿದೆ; ಹಣಕ್ಕಾಗಿ ಯೋಧ ನಾದವನು ನಾನು, ನನ್ನ ಹೆಸರು ಪ್ರಖ್ಯಾತವಾಯಿತು . . . ಆಸೆಯೆಂಬುದು ನನ್ನಿಂದ ದೂರವಾಗಿದ್ದರೂ, ದಿನಗಳು ಬಂದಾವೇ ಎಂದು ಕಾಯ್ದೆ; ಕಟ್ಟ ಕಡೆಗೆ, ಫ್ಲಾರೆನ್ಸ್ ನನ್ನನ್ನು ಪೀಸಾದ ಮೇಲೆ ಕಳಿಸಿತು . . .

**ವನ್ನ :** ಪ್ರೀತಿಗೆ ವಶರಾದಾಗ ಜನರು ಎಷ್ಟು ಅಬಲರಾಗುವರು, ಎಷ್ಟು ಹೇಡಿಗಳಾಗುವರು! . . . ನನ್ನ ಮಾತನ್ನು ಚೆನ್ನಾಗಿ ಅರ್ಥಮಾಡಿಕೊ; ನಿನ್ನಲ್ಲಿ ನನಗೆ ಪ್ರೀತಿಯಿಲ್ಲ, ನಿನ್ನನ್ನು ಎಂದಾದರೂ ಪ್ರೀತಿಸಲು ಸಾಧ್ಯವಿತ್ತೆ ಎಂಬುದನ್ನೂ ಹೇಳಲಾರೆ . . . ಆದರೂ, ನಾನೇ ಹೇಗೆ ಪ್ರೀತಿಸಬಹುದಾ ಗಿತ್ತೊ ಹಾಗೆ ಪ್ರೀತಿಸುವೆನೆಂದು ನಟಿಸಿದ ಮನುಷ್ಯನು, ಆ ಪ್ರೇಮದೆದುರು ತಕ್ಕಷ್ಟು ಧೈರ್ಯದಿಂದ ವರ್ತಿಸಲಿಲ್ಲವಲ್ಲಾ ಎಂಬುದನ್ನು ಕಂಡು, ನನ್ನ ಪ್ರೇಮದ ಜೀವಾಳವು ದಿಗ್ಗನೆದ್ದು, ಹೃದಯದೊಳಗೆ ಕೊರಗಿ ಕೂಗಿಡುವುದು . . .

**ಪ್ರಿನ್ಸಿವಲ್ಲೆ :** ಧೈರ್ಯ ಕುಂದಿದೆನೆಂದಲ್ಲ . . . ನಾನು ಮುಂದುವರಿಯ ಬೇಕಾಗಿದ್ದರೆ, ನೀನು ಹೇಳಿದ್ದಕ್ಕಿಂತ ಇನ್ನೂ ಹೆಚ್ಚಿನದು ಅಗತ್ಯವಾಗಿತ್ತು . . . ಆದರೆ, ಕಾಲ ಮೀರಿಹೋಗಿತ್ತು.

**ವನ್ನ :** ನೀನು ವೆನಿಸನ್ನು ಬಿಟ್ಟಾಗ ಕಾಲ ಮೀರಿಹೋಗಿರಲಿಲ್ಲ. ತನ್ನ

ಬದುಕನ್ನೇ ತುಂಬುವಂತಹ ಪ್ರೇಮವನ್ನು ಕಂಡಿರುವಾಗ, ಕಾಲ ಮೀರುವು ದೆಂದರೇನು . . . ಅಂಥ ಪ್ರೀತಿಯು ಎಂದಿಗೂ ತಾನು ಅದನ್ನು ಪರಿತ್ಯಜಿಸುವು ದಿಲ್ಲ. ಪ್ರತಿಫಲವಾಗಿ ಏನನ್ನೂ ಬಯಸದಿದ್ದರೂ, ಅದರ ಭರವಸೆ ನಷ್ಟ ವಾಗಿರುವುದಿಲ್ಲ. ಭರವಸೆ ಹೋದ ಮೇಲೆಯೂ, ಇನ್ನೂ ಹೆಣಗುತ್ತಲೆ ಇರು ತ್ತದೆ. ನೀನು ಪ್ರೀತಿಸಿದೆನೆಂದು ಹೇಳಿದಂತೆ ನಾನು ಪ್ರೀತಿಸಿದ್ದಿದ್ದರೆ, ಆಗ ನಾನೇನು ಮಾಡುತ್ತಿದ್ದೆ, ಗೊತ್ತೆ . . . ಆಃ, ಏನು ಮಾಡುತ್ತಿದ್ದೆನೋ ಯಾರಿಗೆ ಹೇಳಲು ಸಾಧ್ಯ . . . ಆದರೆ, ಇಷ್ಟು ಮಾತ್ರ ನನಗೆ ಗೊತ್ತು, ವಿಧಿಯು ಏನೂ ಹೋರಾಟವಿಲ್ಲದೆ ನನ್ನ ಸುಖವನ್ನು ನನ್ನಿಂದ ಕಸಿಯುವುದು ಸಾಧ್ಯವಾಗುತ್ತಿ ರಲಿಲ್ಲ . . . ವಿಧಿಯನ್ನು ಕುರಿತು "ಹೋಗಾಚೆ! ತೊಲಗಾಚೆ! ಇದು ನನ್ನ ದಾರಿ!" ಎಂದು ಕೂಗಿಡುತ್ತಿದ್ದೆ . . . ಕೇವಲ ಕಲ್ಲುಗಳು ಕೂಡ ನನ್ನ ಪಕ್ಷ ಹಿಡಿದು ವಾದಿಸುವಂತೆ ಒತ್ತಾಯಪಡಿಸುತ್ತಿದ್ದೆ! ಏನೇ ಆದರೂ ಆಗಲಿ, ಯಾರನ್ನು ನಾನು ಪ್ರೀತಿಸಿದೆನೋ ಅವನು ನನ್ನ ಪ್ರೇಮವನ್ನು ಅರಿತು, ಅವನೇ ಅದರ ಇತ್ಯರ್ಥವನ್ನು, ಒಂದು ಸಲವಲ್ಲ, ಹತ್ತಾರು ಸಲ ತಾನೇ ಹೇಳುವಂತೆ ಮಾಡುತ್ತಿದ್ದೆ! . . .

**ಪ್ರಿನ್ಸಿವಲ್ಲೆ:** (ಅವಳ ಕೈಯನ್ನು ಹುಡುಕಿ,) ನಿನಗೆ ಅವನಲ್ಲಿ ಪ್ರೀತಿ ಯಿಲ್ಲ, ವನ್ನ?

**ವನ್ನ:** ಯಾರಲ್ಲಿ?

**ಪ್ರಿನ್ಸಿವಲ್ಲೆ:** ಗ್ವೀಡೋವಿನಲ್ಲಿ.

**ವನ್ನ:** (ತನ್ನ ಕೈಗಳನ್ನು ಹಿಂದೆಳೆದುಕೊಂಡು,) ನನ್ನ ಕೈಗಳನ್ನು ಕೊಳ್ಳ ಬೇಡ. ಅವುಗಳನ್ನು ನಿನಗೆ ಕೊಡಲಾರೆ. ನನ್ನ ಮನಸ್ಸು ನಿನಗೆ ಸ್ಪಷ್ಟವಾಗ ಬೇಕೆಂದು ತಿಳಿಯಿತು. ಗ್ವೀಡೊ ನನ್ನನ್ನು ಮದುವೆಯಾದಾಗ ನಾನು ಒಂಟಿ ಯಾಗಿದ್ದೆ, ಹೆಚ್ಚೂಕಡಮೆ ಬಡವಳಾಗಿ; ಒಂಟಿಯಾದವಳು, ಬಡವಳಾದವಳು, ಅದರಲ್ಲೂ ಅವಳು ರೂಪವತಿಯಾಗಿದ್ದರೆ, ಸುಳ್ಳು ತಟವಟಗಳನ್ನು ತಿರಸ್ಕರಿ ಸುವವಳಾದರೆ, ಬಹುಬೇಗ ಲೋಕಾಪವಾದಕ್ಕೆ ಗುರಿಯಾಗುವಳು . . . ಈ ಅಪವಾದಗಳನ್ನು ಗ್ವೀಡೊ ಲಕ್ಷಿಸಲಿಲ್ಲ; ಅವನಿಗೆ ನನ್ನಲ್ಲಿ ನಂಬಿಕೆಯಿತ್ತು, ಅವನ ನಂಬಿಕೆ ನನಗೆ ಪ್ರಿಯವಾಯಿತು. ಅವನಿಂದ ನನಗೆ ಸುಖವಾಯಿತು; ಮನುಷ್ಯಜೀವನಕ್ಕೆ ಮೀರಿದುದೆಂದು ತೋರಿಬರುವ ಅಸ್ಪಷ್ಟವೂ ವಿಪರೀತವೂ

ಆದ ಕನಸುಗಳನ್ನು ಕಳೆದು ತಳ್ಳಿದಾಗ ಪಡೆಯುವ ಸುಖವಷ್ಟನ್ನಾದರೂ ಪಡೆದೆ; ಯಾರೂ ಕಾಣದೆ ಇರತಕ್ಕ ಸುಖವನ್ನು ಹುಡುಕುವುದರಲ್ಲಿಯೇ ತನ್ನ ಆಯುಸ್ಯವನ್ನು ಕಳೆಯದೆ, ಹಾಗೆಯೇ ಸುಖವಾಗಿರಬಹುದೆಂದು ನಿನ್ನನ್ನು ಒಪ್ಪಿಸುವ ಭರವಸೆ ನನಗಿದೆ. ನಾನು ಈ ದಿವಸ ಗ್ವೀಡೋವಿನಲ್ಲಿ ಇರಿಸಿರುವ ಪ್ರೀತಿಯು ನಿನ್ನ ಮನಸ್ಸಿನಲ್ಲಿ ನೀನು ನನ್ನ ವಿಷಯವಾಗಿ ಕಲ್ಪಿಸಿಕೊಂಡಿರುವುದರಷ್ಟು ವಿಚಿತ್ರವಾದದ್ದಲ್ಲ; ನನ್ನದಾದರೂ ನಿನ್ನದಕ್ಕಿಂತ ನಿಶ್ಚಲವಾದದ್ದು, ಶಾಂತವಾದದ್ದು, ವಿಶ್ವಸ್ತವಾದದ್ದು, ಖಚಿತವಾದದ್ದು . . . ಅದೃಷ್ಟವು ನನಗೆ ದಯಪಾಲಿಸಿರುವ ಪ್ರೀತಿ ಇಂಥದು; ನಾನು ತೆರೆದ ಕಣ್ಣಿಂದ ಅದನ್ನು ಒಪ್ಪಿಕೊಂಡೆ: ಬೇರೆ ಯಾವುದನ್ನೂ ನಾನು ಒಲ್ಲೆ; ಅದನ್ನು ಯಾರಾದರೂ ಭಂಗಪಡಿಸುವುದಾದರೆ, ಆ ಭಂಗವನ್ನು ತರುವವಳು ನಾನಲ್ಲ . . . ನನ್ನ ಮನಸ್ಸನ್ನು ನೀನು ಸರಿಯಾಗಿ ತಿಳಿದಿರಲಿಲ್ಲವೆಂದು ಈಗ ಅರ್ಥವಾಗಿರಬೇಕು . . . ನಿನ್ನ ತಪ್ಪು ಇದು ಎಂದು ನನಗೆ ತೋರಿದುದನ್ನು ನಿನಗೆ ತೋರಿಸಲು ಯತ್ನಿಸಿದಾಗ, ನಾನು ನಿನ್ನ ವಿಷಯ ಮಾತನಾಡುತ್ತಿರಲಿಲ್ಲ, ನಮ್ಮ ವಿಷಯ ಮಾತನಾಡುತ್ತಿರಲಿಲ್ಲ: ಮೊತ್ತಮೊದಲನೆಯ ಉದಯಕಾಲದಲ್ಲಿ ಹೃದಯಕ್ಕೆ ಬಂದಿಳಿಯುವ ಪ್ರೇಮದ ಕಿರುಕಟಾಕ್ಷವನ್ನು ಕುರಿತು ಹೇಳಿದೆನಷ್ಟೆ: ಯಾವ ಪ್ರೀತಿ, ಬಹುಶಃ ಇರಬಹುದಾದರೂ, ನನ್ನದಲ್ಲವೋ, ನಿನ್ನದಲ್ಲವೋ ಅದನ್ನು ಕುರಿತು ಹೇಳಿದೆನಷ್ಟೆ: ಏಕೆಂದರೆ, ಅಂಥ ಪ್ರೇಮವು ಏನನ್ನು ಮಾಡಬಯಸುವುದೋ ಅದನ್ನು ನೀನು ಮಾಡಿದವನಲ್ಲ . . .

**ಪ್ರಿನ್ಸಿವಲ್ಲೆ**: ವನ್ನ, ನನ್ನ ವಿಷಯವಾಗಿ, ಅಥವಾ ನನ್ನ ಪ್ರೇಮದ ವಿಷಯವಾಗಿ ಎನ್ನೋಣ, ಬಹಳ ಕಠಿಣವಾಗಿ ಮಾತನಾಡುತ್ತೀಯೆ. ಇತರ ಎಲ್ಲಾ ಪ್ರೇಮಗಳನ್ನೂ ನಿರಾಶೆಯಲ್ಲಿ ಅದ್ದಿಯೇಬಿಡುವಂತಹ ಈ ಒಂದು ಸುಖದ ಕ್ಷಣವನ್ನು ಸಾಧಿಸುವುದಕ್ಕಾಗಿ ಈ ನನ್ನ ಪ್ರೇಮವು ಏನು ಮಾಡಿತು, ಏನು ಅನುಭವಿಸಬೇಕಾಯಿತು, ಎಂಬುದರ ತಿಳಿವಳಿಕೆ ಸಾಕಷ್ಟು ಇಲ್ಲದೆ, ನೀನು ಹೀಗೆ ಮಾತನಾಡುತ್ತಿದ್ದೀಯೆ . . . ಅದು ಏನನ್ನು ಮಾಡಿಲ್ಲದಿದ್ದರೂ, ಏನು ಮಾಡುವುದಕ್ಕೂ ಯತ್ನಿಸದಿದ್ದರೂ, ಅದರ ಪ್ರಭಾವಕ್ಕೆ ತುತ್ತಾದ ನನಗೆ, ಅದರ ಕೈಯಲ್ಲಿ ಜೀವ ಸಿಕ್ಕಿಕೊಂಡಿರುವ ನನಗೆ, ಅದರ ಅಸ್ತಿತ್ವ ಗೊತ್ತು: ಅದನ್ನು ಹೃದಯದಲ್ಲಿ ಹೊರುವವನು ನಾನು, ಮನುಷ್ಯನಿಗೆ ಸಂತೋಷ

ಸತ್ಕೀರ್ತಿಗಳನ್ನು ಯಾವುದು ತಂದುಕೊಡುವುದೋ ಅವೆಲ್ಲವನ್ನೂ ಕಳೆದು ಕೊಂಡವನು ನಾನು! . . . ಆಃ, ನನ್ನ ಮಾತನ್ನು ನಂಬು, ವನ್ನ. ನೀನು ನಂಬಲೆಬೇಕು; ಏಕೆಂದರೆ, ನಾನು ಏನನ್ನೂ ಬೇಡತಕ್ಕವನಲ್ಲ, ಏನಾದರೂ ದೊರಕೀತೆಂಬ ಭರವಸೆಯುಳ್ಳವನೂ ಅಲ್ಲ! . . . ನೀನು ಈಗ ನನ್ನ ಗುಡಾರ ದಲ್ಲಿರುವೆ, ನಾನು ಏನು ಬೇಕಾದರೂ ಮಾಡಬಹುದು . . . ನಾನು ಒಂದು ಮಾತನಾಡಿದರೆ ಸಾಕು, ನನ್ನ ಕೈ ಚಾಚಿದರೆ ಸಾಕು, ಸಾಮಾನ್ಯನಾದ ಪ್ರಣ ಯಿಯು ಕೇಳುವುದೆಲ್ಲ ನನ್ನದಾಗುವುದು . . . ಆದರೆ, ನಾನು ಪ್ರಸ್ತಾಪಿಸಿದ ಆ ಪ್ರೇಮವು ಇತರ ವಸ್ತುಗಳನ್ನು ಆಶಿಸುತ್ತದೆ, ಎಂಬುದನ್ನು ನಾನು ತಿಳಿದಿರು ವಂತೆಯೇ ನೀನೂ ಬಲ್ಲೆ; ಆದ್ದರಿಂದಲೆ, ನನ್ನ ವಿಷಯವಾಗಿ ಇನ್ನು ನಿನಗೆ ಶಂಕೆ ಬೇಡವೆಂದು ನಾನು ಕೇಳಿಕೊಳ್ಳುವುದು . . . ನನ್ನ ಮಾತನ್ನು ನೀನು ನಂಬೀಯೆ ಎಂದುಕೊಂಡು ನಿನ್ನ ಕೈಯನ್ನು ಹಿಡಿದೆ . . . ನಾನು ಮತ್ತೆ ಅದನ್ನು ಮುಟ್ಟುವುದಿಲ್ಲ, ನನ್ನ ತುಟಿ ಅದಕ್ಕೆ ಸೋಕುವುದಿಲ್ಲ; ಆದರೆ, ಇಷ್ಟಾ ದರೂ ಮಾಡು, ವನ್ನ: ಈಗ ಬೀಳ್ಕೊಂಡ ಮೇಲೆ ಹೇಗೂ ಪುನರ್ದರ್ಶನವಿಲ್ಲ ವಷ್ಟೆ; ಹೋಗುವ ಮೊದಲು, ನನ್ನ ಪ್ರೀತಿ ಎಂಥದಾಗಿತ್ತು, ಯಾವ ಅಸಾಧ್ಯದ ಎದುರು ಅದು ತಡೆದು ನಿಂತಿತು—ಅದನ್ನಾದರೂ ತಿಳಿದು ಹೋಗು.

**ವನ್ನ**: ಯಾವುದನ್ನೇ ಆಗಲಿ ಅದು ಅಸಾಧ್ಯವೆಂದು ಗಣಿಸಲು ಸಾಧ್ಯ ವಾಯಿತು—ಎಂಬುದು ಇದೇ ನನ್ನ ಶಂಕೆಗೆ ಕಾರಣ . . . ಅತಿಮಾನುಷವಾದ ಪರೀಕ್ಷೆಗಳನ್ನಾಗಲಿ, ಭಯಂಕರವಾದ ಅಡಚಣೆಗಳನ್ನಾಗಲಿ ಅದು ದಾಟಲೇ ಬೇಕೆಂದು ನಾನು ಕೇಳುತ್ತಿಲ್ಲ. ಈ ರೀತಿಯಾದ ಋಜುವಾತುಗಳಿಗಾಗಿ ನಾನು ಕೇಳುತ್ತಿಲ್ಲ, ನಂಬುವುದಕ್ಕೆ ನಾನು ಇಷ್ಟವುಳ್ಳವಳಾಗಿಯೇ ಇದ್ದೇನೆ . . . ನಿಜವಾಗಿಯೂ, ನಾನು ಇನ್ನೂ ಶಂಕೆಪಡಲು ಯತ್ನಿಸುವುದಾದರೆ, ಅದು ನಿನ್ನ ಸುಖಕ್ಕೋಸ್ಕರವಾಗಿ, ನನ್ನ ಸುಖಕ್ಕೋಸ್ಕರವಾಗಿ . . . ನಿನ್ನ ಪ್ರೇಮ ದಂತಹ ಮಹಾ ಸಮರ್ಥವಾದ ಪ್ರೇಮದಲ್ಲಿ ಏನೋ ಪವಿತ್ರತೆ ಇದೆ, ಅದು ಅತ್ಯಂತ ಅನಾಸಕ್ತಳಾದ ಹೆಂಗುಸನ್ನಾದರೂ ಕಲಕಿಬಿಡಬಲ್ಲದು . . . ಆದ ಕಾರಣದಿಂದಲೇ, ನೀನು ಮಾಡಿರುವುದನ್ನು ನಾನು ಹೀಗೆ ಕುತ್ತಿ ಕುತ್ತಿ ನೋಡುವುದು; ಈ ಹಾನಿಕರವಾದ ವಿಷಯಾಸಕ್ತಿಯ ಗುರುತು ಯಾವುದರ ಮೇಲೆಯೂ ಇಲ್ಲ ಎಂಬುದನ್ನು ಕಂಡೆನಾದರೆ ನನಗೆ ಸುಖವೇ ಆದೀತು; ಇಂಥ

ವಿಷಯಾಸಕ್ತಿಯನ್ನು ವಿಧಿ ನಗುಮುಖದಿಂದ ನೋಡುವುದಿಲ್ಲ . . . ಈ ನಿನ್ನ ಕಡೆಯ ಕೃತ್ಯವೊಂದಿಲ್ಲದೆ ಹೋಗಿದ್ದರೆ, ನಾನು ಏನನ್ನೂ ಕಾಣಲಿಲ್ಲವೆಂದು ನಿಶ್ಚಿಂತಳಾಗಿರುತ್ತಿದ್ದೆ; ಏಕೆಂದರೆ, ನೀನು ಈ ಒಂದು ಗಂಟೆಯ ಕಾಲ ನನ್ನನ್ನು ನಿನ್ನ ಗುಡಾರದಲ್ಲಿ ಬರಮಾಡಿಕೊಳ್ಳುವುದಕ್ಕೋಸ್ಕರ ನಿನ್ನ ಭವಿಷ್ಯವನ್ನೂ ನಿನ್ನ ಕೀರ್ತಿಯನ್ನೂ ನಿನ್ನ ಇಹಲೋಕದ ಸರ್ವಸ್ವವನ್ನೂ ಹೀಗೆ ಹುಚ್ಚನಾಗಿ ಹಾಳುಮಾಡಿಕೊಂಡೆ ಎಂಬುದನ್ನು ನಾನು ಜ್ಞಾಪಿಸಿಕೊಂಡಾಗ—ಆಗ ನಾನು ಒಪ್ಪಲೇಬೇಕು ಎನ್ನಿಸುತ್ತದೆ: ನಿನ್ನ ಪ್ರೇಮವು ನೀನು ಹೇಳುವಂತಹದೇ ಇದ್ದರೂ ಇರಲು ಸಾಧ್ಯ ಎಂದು . . .

**ಪ್ರಿನ್ಸಿವಲ್ಲೆ:** ಈ ಕಡೆಯ ಕೃತ್ಯವೊಂದು ಮಾತ್ರ ಯಾವುದನ್ನೂ ಋಜುವಾತು ಮಾಡಿಕೊಡುವುದಿಲ್ಲ . . .

**ವನ್ನ:** ಅದು ಹೇಗೆ?

**ಪ್ರಿನ್ಸಿವಲ್ಲೆ:** ನಿಜವನ್ನು ನೀನು ತಿಳಿಯುವುದು ವಾಸಿ. ನಿನ್ನನ್ನು ಇಲ್ಲಿಗೆ ಬರಮಾಡಿಕೊಂಡದ್ದರಿಂದ, ನಿನ್ನ ಹೆಸರಿನಲ್ಲಿ ಪೀಸಾವನ್ನು ರಕ್ಷಣೆ ಮಾಡಿದ್ದರಿಂದ, ನನಗೆ ಏನೂ ನಷ್ಟವಾದದ್ದಿಲ್ಲ.

**ವನ್ನ:** ನನಗೆ ಅರ್ಥವಾಗದು . . . ನೀನು ದೇಶಕ್ಕೆ ಎರಡು ಬಗೆದಿಲ್ಲವೆ, ನಿನ್ನ ಪೂರ್ವದ ಸೇವೆಗಳನ್ನು ತೊಡೆದಿಲ್ಲವೆ, ನಿನ್ನ ಭವಿಷ್ಯವನ್ನು ನಾಶಮಾಡಿಕೊಂಡಿಲ್ಲವೆ? ಮುಂದೆ ನಿನಗಾಗಿ ಏನು ಕಾದಿದೆ? ದೇಶಭ್ರಷ್ಟತೆಯೋ, ಮರಣವೋ, ಅಲ್ಲವೆ?

**ಪ್ರಿನ್ಸಿವಲ್ಲೆ:** ಮೊದಲನೆಯದಾಗಿ, ನನಗೆ ದೇಶವಿಲ್ಲ. ಹಾಗೆ ಇದ್ದಿದ್ದರೆ, ನನ್ನ ಪ್ರೇಮ ಏನೇ ಮಹತ್ತಾಗಿದ್ದರೂ, ಆ ಪ್ರೇಮಕ್ಕೋಸ್ಕರ ಅದಕ್ಕೆ ದ್ರೋಹಮಾಡುತ್ತಿರಲಿಲ್ಲ . . . ಆದರೆ, ನಾನು ಸಂಬಳಕ್ಕಾಗಿ ಸೇರಿಬಂದ ಸೇನಾಪತಿ, ಉಳಿದವರು ವಿಶ್ವಾಸವಿಟ್ಟರುವ ವರೆಗೆ ನಾನೂ ವಿಶ್ವಾಸಿಗನೆ, ಅವರು ದ್ರೋಹಮಾಡಿದಾಗ ನಾನೂ ದ್ರೋಹಿಯೇ . . . ಫ್ಲಾರೆನ್ಸಿನ ನಿಯೋಗದವರು ನನ್ನ ಮೇಲೆ ಸುಳ್ಳು ಆಪಾದನೆಗಳನ್ನು ಹೊರೆಸಿ, ವಿಚಾರಣೆಯೇ ಇಲ್ಲದೆ ನನಗೆ ದಂಡನೆ ವಿಧಿಸಿದ್ದಾರೆ; ಅವರ ಕಾರ್ಯದ ವಿಧಾನಗಳನ್ನು ನಾನು ತಿಳಿದಿರುವಂತೆಯೆ ನೀನೂ ಬಲ್ಲೆ. ನನ್ನ ಕತೆ ಮುಗಿದ ಹಾಗೆಯೆ ಎಂದು ನನಗೆ ತಿಳಿದಿತ್ತು; ಆದ್ದರಿಂದ ಈ ರಾತ್ರೆ ನಾನು ಮಾಡಿರುವ ಈ ಕೆಲಸ, ನನ್ನ

ನಾಶವನ್ನು ತ್ವರೆಗೊಳಿಸುವ ಬದಲು, ಬಹುಶಃ, ಸಾಧ್ಯವಾದರೆ, ಇನ್ನೂ ನನ್ನನ್ನು ಉಳಿಸಲು ಕಾರಣವಾಗಬಹುದು . . .

**ವನ್ನ**: ಹಾಗಾದರೆ, ನನಗೋಸ್ಕರವಾಗಿ ನೀನು ಪರಿತ್ಯಜಿಸಿದ್ದು ಗಣನೆಗೆ ಬರುವುದಿಲ್ಲವೇನು ?

**ಪ್ರಿನ್ಸಿವಲ್ಲೆ**: ಯಾವ ಗಣನೆಗೂ ಬರುವುದಿಲ್ಲ . . . ಇದನ್ನು ನಿನಗೆ ಹೇಳದೆ ಇರಲಾಗಲಿಲ್ಲ. ಸುಳ್ಳು ಹೇಳಿ ಪಡೆದುಕೊಂಡ ನಿನ್ನ ಮುಗುಳ್ನಗೆಯಿಂದ ನನಗೇನೂ ಸಂತೋಷವಾಗುತ್ತಿರಲಿಲ್ಲ . . .

**ವನ್ನ**: ಆಃ, ಗಯಾನೆಲ್ಲೊ, ಗಯಾನೆಲ್ಲೊ, ಇದರ ಬೆಲೆ ಪ್ರೀತಿಗಿಂತಲೂ ಅದರ ಉದಾತ್ತವಾದ ಋಜುವಾತುಗಳಿಗಿಂತಲೂ ಅಧಿಕವಾದ್ದು. ನಿನ್ನಿಂದ ದೂರವಾಗಿ ಓಡಿಹೋದ ಕೈಯನ್ನು ನೀನು ಹುಡುಕಿಬರಬೇಕಾದ್ದಿಲ್ಲ. ಇದೋ, ತೆಗೆದುಕೊ . . .

**ಪ್ರಿನ್ಸಿವಲ್ಲೆ**: ಓ, ಪ್ರೇಮವು ಇದನ್ನು ಪಡೆದುಕೊಟ್ಟಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು! . . . ಹೋಗಲಿ, ಹೇಗೆ ಬಂದರೆ ಏನಂತೆ! . . . ಇದು ನನ್ನದಾಯಿತು, ವನ್ನ: ನನ್ನ ಕೈಗಳ ನಡುವೆ ಹಿಡಿದು, ಇದರ ಪರಿಮಳವನ್ನು ಕುಡಿದು, ಇದರ ಬದುಕನ್ನು ಬದುಕಿ, ಇದರೊಡನೆ ಒಂದಾಗಿ,—ಒಂದು ಕ್ಷಣಕಾಲ ಈ ಹಿತವಾದ ಮಾಯೆಯಲ್ಲಿ ತಲ್ಲೀನನಾಗುತ್ತೇನೆ . . . ಆಃ, ಮುದ್ದು ಕೈಯೆ! ಇದೊ ಮಡಿಸುತ್ತೇನೆ, ಇದೊ ಬಿಡಿಸುತ್ತೇನೆ, ಪ್ರಣಯಿಗಳ ಗೂಢವಾದ ಭಾಷೆಯಲ್ಲಿ ರಹಸ್ಯಗಳನ್ನು ಹೇಳುತ್ತದೆಯೋ ಎಂಬಂತೆ; ಇದೋ, ಇದಕ್ಕೆ ಮುತ್ತು ಇಕ್ಕುತ್ತೇನೆ, ಆದರೂ ಅದನ್ನು ಇನ್ನೂ ಅಲ್ಲೆ ಇರಗೊಡುತ್ತೀಯೆ . . . ಹಾಗಾದರೆ, ನಾನು ನಿನ್ನನ್ನು ಈಡುಮಾಡಿದ ಈ ಕ್ರೂರ ಪರೀಕ್ಷೆಗಾಗಿ ನನ್ನನ್ನು ಕ್ಷಮಿಸುವೆಯ ? . . .

**ವನ್ನ**: ನಿನ್ನ ಸ್ಥಾನದಲ್ಲಿ ಇದ್ದಿದ್ದರೆ, ನಾನೂ ಹೀಗೇ ಮಾಡುತ್ತಿದ್ದೆ; ಇದಕ್ಕಿಂತ ಮೇಲಾಗುತ್ತಿತ್ತೋ ಕೀಳಾಗುತ್ತಿತ್ತೋ ಹೇಳಲಾರೆ . . .

**ಪ್ರಿನ್ಸಿವಲ್ಲೆ**: ನನ್ನ ಗುಡಾರಕ್ಕೆ ಬರಲು ನೀನು ಒಪ್ಪಿದಾಗ, ನಾನು ಯಾರೆಂಬುದು ನಿನಗೆ ಗೊತ್ತಿತ್ತೆ? . . .

**ವನ್ನ**: ಯಾರಿಗೂ ಗೊತ್ತಿರಲಿಲ್ಲ. ಏನೇನೋ ವಿಚಿತ್ರವಾದ ವದಂತಿ . . . ಪ್ರಿನ್ಸಿವಲ್ಲೆ ಭಯಂಕರನಾದ ಮುದಿಯ ಎಂದು ಕೆಲವರು; ಅತಿಶಯ

ರೂಪವಂತನಾದ ಕಿರುಹರೆಯದ ರಾಜಕುಮಾರನೆಂದು ಇನ್ನು ಕೆಲವರು . . .

**ಪ್ರಿನ್ ಸಿವಲ್ಲೆ:** ಆದರೆ, ಗ್ವೀಡೋವಿನ ತಂದೆ ನನ್ನನ್ನು ನೋಡಿದನು; ಅವನು ಏನೂ ಹೇಳಲಿಲ್ಲವೆ? . . .

**ವನ್ನ:** ಇಲ್ಲ.

**ಪ್ರಿನ್ ಸಿವಲ್ಲೆ:** ನೀನು ಅವನನ್ನು ಪ್ರಶ್ನಿಸಲಿಲ್ಲ? . . .

**ವನ್ನ:** ಇಲ್ಲ.

**ಪ್ರಿನ್ ಸಿವಲ್ಲೆ :** ಆದರೆ ಅಸಹಾಯಳಾಗಿ, ರಾತ್ರಿಯಲ್ಲಿ, ಅಪರಿಚಿತ ನಾದ ಅನಾಗರಿಕನ ಗುಡಾರಕ್ಕೆ ಬರುವಾಗ ನಿನಗೆ ಎದೆಗುಂದಲಿಲ್ಲವೆ? . . .

**ವನ್ನ:** ಆಹುತಿಯನ್ನು ಒಪ್ಪಿಸಬೇಕಾಗಿತ್ತಲ್ಲವೆ?

**ಪ್ರಿನ್ ಸಿವಲ್ಲೆ :** ಮತ್ತೆ, ನೀನು ನನ್ನನ್ನು ಕಂಡಾಗ?

**ವನ್ನ:** ಮೊದಲು ಈ ಬಟ್ಟೆಯ ಪಟ್ಟೆ ನಿನ್ನ ಮುಖವನ್ನು ಮರೆ ಮಾಡಿತ್ತು . . .

**ಪ್ರಿನ್ ಸಿವಲ್ಲೆ:** ಸರಿ, ಆದರೆ ಆಮೇಲೆ, ವನ್ನ, ಪಟ್ಟೆಗಳನ್ನು ಮೇಲೆ ತ್ತಿದಾಗ?

**ವನ್ನ:** ಆಗ ಬೇರೆಯಾಯಿತು, ಆವೇಳೆಗೆ ನಿನ್ನ ಗುರುತಾಗಿತ್ತು . . . ಆದರೆ ನೀನು, ನಾನು ಗುಡಾರದೊಳಗೆ ಬಂದುದನ್ನು ಕಂಡಾಗ—ನಿನ್ನ ಮನ ಸ್ಸಿನಲ್ಲಿ ಏನಿತ್ತು? ಏನು ಮಾಡಬೇಕೆಂದು ಉದ್ದೇಶಿಸಿದ್ದೆ? . . .

**ಪ್ರಿನ್ ಸಿವಲ್ಲೆ:** ಆಃ, ಅದು ಹೇಗೆ ಹೇಳಲಿ! . . . ನಾನು ಮುಳುಗಿದೆ ನೆಂದು ಗೊತ್ತಿತ್ತು, ನನ್ನ ಜೊತೆಗೇ ಎಲ್ಲ ವಸ್ತುಗಳನ್ನೂ ಎಳೆದುಕೊಂಡು ಹೋಗಿಬಿಡಬೇಕೆಂಬ ಒಂದು ಹುಚ್ಚುಬಯಕೆ ಹುಟ್ಟಿತ್ತು . . . ಈ ನನ್ನ ಪ್ರೇಮವೆ ಕಾರಣವಾಗಿ ನಿನ್ನನ್ನು ನಾನು ದ್ವೇಷಿಸುತ್ತಿದ್ದೆ! ಈಗ ಹಾಗೇ ಯೋಚನೆ ಮಾಡಿದರೆ, ನನಗೆ ಆಶ್ಚರ್ಯವಾಗುತ್ತದೆ . . . ನಿನ್ನದಲ್ಲದ ಒಂದು ಮಾತು, ನಿನ್ನ ಅಂಗಭಾವಕ್ಕಿಂತ ಬೇರೆಯಾದ ಒಂದು ಅಂಗಭಾವ—ಅಷ್ಟು ಮಾತ್ರ ಸಾಕಾಗುತ್ತಿತ್ತು: ನನ್ನೊಳಗಿನ ಪಶುಪ್ರವೃತ್ತಿಯನ್ನು ವಿಶೃಂಖಲ ಗೊಳಿಸುವುದಕ್ಕೆ, ನನ್ನ ದ್ವೇಷವನ್ನು ಊದಿ ಉರಿಸುವುದಕ್ಕೆ . . . ಆದರೆ, ನಿನ್ನನ್ನು ಕಂಡ ಕ್ಷಣವೆ ಅದು ಎಷ್ಟು ಅಸಾಧ್ಯವೆಂಬುದನ್ನು ನಾನು ಕಂಡು ಕೊಂಡೆ . . .

**ವನ್ನ:** ನಾನೂ ಹಾಗೆಯೆ ಕಂಡುಕೊಂಡೆ. ಅದರಿಂದಲೆ ನನ್ನ ಭೀತಿಯೆಲ್ಲವೂ ಮಾಯವಾಯಿತು. ಒಂದು ಮಾತನ್ನೂ ಆಡದೆಯೆ ನಾವು ಒಬ್ಬರನ್ನೊಬ್ಬರು ಅರಿತುಕೊಂಡೆವು. ಎಲ್ಲವೂ ತುಂಬ ವಿಚಿತ್ರವಾಗಿದೆ . . . ನಾನೂ ನಿನ್ನಂತೆಯೆ ಪ್ರೀತಿಸಿದ್ದರೆ, ನಾನೂ ಇದನ್ನೇ ಮಾಡುತ್ತಿದ್ದೆನೆಂದು ನನ್ನ ನಂಬಿಕೆ . . . ವಾಸ್ತವವಾಗಿ, ನಿನ್ನ ಮಾತುಗಳನ್ನು ಕೇಳುತ್ತಿರುವಾಗ, ಕೆಲವು ಗಳಿಗೆಯಲ್ಲಿ, ನಾನು ಮಾತನಾಡುತ್ತಿರುವಂತೆಯೂ, ನಿನ್ನ ಮಾತು ನನ್ನ ಮಾತುಗಳಂತೆಯೂ, ನಾನು ಹೇಳುವುದನ್ನು ನೀನು ಕೇಳುತ್ತಿರುವಂತೆಯೂ ನನಗೆ ಭ್ರಮೆಯಾದುದುಂಟು.

**ಪ್ರಿನ್ಸಿವಲ್ಲೆ:** ನನಗೆ ಕೂಡ, ವನ್ನ, ನಮ್ಮನ್ನು ಇತರ ಪ್ರಾಣಿಗಳಿಂದ ಪ್ರತ್ಯೇಕಿಸುವ ಗೋಡೆ ಪಾರದರ್ಶಕದಂತೆ ಆಗುತ್ತಿದೆ ಎನ್ನಿಸಿತು; ಹರಿಯುವ ಹೊಳೆಯಲ್ಲಿ ಕೈಗಳನ್ನು ಅದ್ದಿ, ಹೊರಗೆಳೆದಾಗ ಅವು ಬೆಳಕಿನಿಂದ ಮಿರುಗುತ್ತ ಭರವಸೆಯಿಂದಲೂ ನಿಃಸ್ಪೃಹತೆಯಿಂದಲೂ ಬೆಳಗುತ್ತಿದ್ದುವು ಎಂಬ ಹಾಗಾಯಿತು . . . ಜನರಲ್ಲಿ ಏನೋ ಬದಲಾದಂತೆಯೂ ಈವರೆಗೆ ನಾನು ಎಂದುಕೊಂಡಿದ್ದುದೆಲ್ಲ ತಪ್ಪು ಎಂಬಂತೆಯೂ ತೋರಿತು . . . ಇದೆಲ್ಲಕ್ಕಿಂತ ನಾನೇ ಬದಲಾದಂತೆ, ದೀರ್ಘಕಾಲದ ಬಂಧನದಿಂದ ಕಟ್ಟಕಡೆಗೆ ಬಿಡುಗಡೆ ಹೊಂದಿದಂತೆ, ಅನುಭವವಾಯಿತು; ಸೆರೆಮನೆಯ ಬಾಗಿಲುಗಳನ್ನು ತೆರೆದಂತೆ, ಸಲಾಕಿಗಳ ಸುತ್ತ ಹೂಗಳೂ ಎಲೆಗಳೂ ಹೆಣೆದುಕೊಂಡಂತೆ, ದೂರದ ದಿಗಂತದಲ್ಲಿ ಹಿಮ ಕರಗಿದಂತೆ, ಪ್ರಾತಃಕಾಲದ ಪರಿಶುದ್ಧವಾದ ವಾಯು ನನ್ನ ಆತ್ಮವನ್ನು ಒಳಹೊಕ್ಕು ನನ್ನ ಪ್ರೇಮದ ಮೇಲೆ ಉಸಿರಾಡಿಸಿದಂತೆ ಆಯಿತು! . . .

**ವನ್ನ:** ನನ್ನಲ್ಲಿಯೂ ಒಂದು ಬದಲಾವಣೆಯಾಯಿತು. ಆರಂಭದಿಂದಲೂ ನಿನ್ನೊಡನೆ ನಾನು ಮಾತನಾಡುತ್ತಿದ್ದ ರೀತಿಯನ್ನು ಕಂಡು ನನಗೇ ಆಶ್ಚರ್ಯವಾಯಿತು . . . ಸ್ವಭಾವತಃ ನಾನು ಮೌನವಾಗಿರುವವಳು . . . ಗ್ವೀಡೋವಿನ ತಂದೆಯಾದ ಮಾರ್ಕೊವನ್ನು ಬಿಟ್ಟರೆ ಹೀಗೆ ನಾನು ಯಾವ ಪುರುಷನೊಡನೆಯೂ ಮಾತನಾಡಿದ್ದಿಲ್ಲ; ಆತನೊಡನೆಯಾದರೂ ಹೀಗೆ ಮಾತನಾಡಿದ್ದಿಲ್ಲ . . . ಅವನು ಸಾವಿರಾರು ಕನಸುಗಳಲ್ಲಿ ಮಗ್ನನಾಗಿರುತ್ತಾನೆ; ನಾವು ಮಾತನಾಡುವುದೂ ವಿರಳ . . . ಮಿಕ್ಕವರಾದರೋ, ಅವರ ಕಣ್ಣನ್ನು ಕಂಡೊಡನೆ ನನ್ನ ಉತ್ಸಾಹ ಇಂಗಿಹೋಗುತ್ತದೆ. ಅವರನ್ನು ಕಂಡರೆ ನನಗೆ

ಪ್ರೀತಿಯಿದೆಯೆಂದಾಗಲಿ ಅವರ ಹೃದಯದ ಭಾವಗಳನ್ನು ತಿಳಿಯಲು ಹಂಬಲಿಸುವೆನೆಂದಾಗಲಿ ಅವರೊಡನೆ ಹೇಳಿಕೊಳ್ಳುವ ಧೈರ್ಯವೆಲ್ಲಿಂದ ಬರಬೇಕು? . . . ನಿನ್ನ ಕಣ್ಣು ದೂರ ಅಟ್ಟುವುದಿಲ್ಲ, ದಿಗಿಲುಗೊಳಿಸುವುದಿಲ್ಲ . . . ನಿನ್ನನ್ನು ಈ ಮೊದಲು ಎಲ್ಲಿ ನೋಡಿದ್ದೆನೆಂಬುದನ್ನು ಜ್ಞಾಪಕ ಮಾಡಿಕೊಳ್ಳಲಾರದೆ ಹೋದೆನಾದರೂ, ನಿನ್ನನ್ನು ಬಲ್ಲೆನೆಂದು ನನಗೆನ್ನಿಸಿತು . . .

**ಪ್ರಿನ್ಸಿವಲ್ಲೆ** : ವನ್ನ, ನನ್ನ ದುರದೃಷ್ಟದ ನಕ್ಷತ್ರವು ನನ್ನನ್ನು ಇಷ್ಟು ಕಾಲ ಮಿಂಚಿದ ಮೇಲೆ ನಿನ್ನ ಬಳಿಗೆ ಕರೆದು ತರದಿದ್ದರೆ, ನೀನು ನನ್ನನ್ನು ಪ್ರೀತಿಸಲು ಸಾಧ್ಯವಾಗುತ್ತಿತ್ತೆ? . . .

**ವನ್ನ**: ಪ್ರೀತಿಸಲು ಸಾಧ್ಯವಾಗುತ್ತಿತ್ತು ಎಂದು ಹೇಳಿದೆನಾದರೆ, ಈಗ ನಿನ್ನನ್ನು ಪ್ರೀತಿಸುತ್ತೇನೆ ಎಂದ ಹಾಗೆಯೆ ಆಯಿತಲ್ಲವೆ, ಗಯೊನೆಲ್ಲೊ? ಆದರೆ ಅದು ಸಾಧ್ಯವಾಗದು ಎಂಬುದನ್ನು ನನ್ನಂತೆಯೆ ನೀನಾದರೂ ಬಲ್ಲೆ . . . ಆದರೆ, ಯಾವುದೋ ನಿರ್ಜನದ್ವೀಪದಲ್ಲಿರುವಂತೆ ನಾವು ಒಬ್ಬರೊಡನೊಬ್ಬರು ಮಾತನಾಡಿಕೊಳ್ಳುತ್ತಿರುವೆವು . . . ಪ್ರಪಂಚದಲ್ಲಿ ನಾನೊಬ್ಬಳೆ ಇದ್ದಿದ್ದರೆ, ಹೆಚ್ಚು ಹೇಳಬೇಕಾದ್ದು ಇರುತ್ತಿರಲಿಲ್ಲ . . . ಆದರೆ, ನಾವಿಬ್ಬರೂ ಕಳೆದುಹೋದುದನ್ನು ನೆನೆದು ನಸುನಗುತ್ತಿದ್ದರೆ, ಇನ್ನೊಬ್ಬನು ದುಃಖಪಡುತ್ತಿರುವನೆಂಬುದನ್ನು ಮರೆಯುತ್ತಿದ್ದೇವೆ . . . ಪೀಸಾವನ್ನು ನಾನು ಬಿಟ್ಟು ಬಂದಾಗ ಗ್ವಿಡೋ ಪಟ್ಟ ದುಃಖವನ್ನೂ ಅವನ ಕಣ್ಣುಗಳಲ್ಲಿನ ನಿರಾಶೆಯನ್ನೂ ಅವನ ಕಳೆಗುಂದಿದ ಮುಖವನ್ನೂ ಜ್ಞಾಪಿಸಿಕೊಂಡರೆ,—ಓ, ಇನ್ನು ನಾನು ತಡೆದಿರಲಾರೆ! . . . ಇನ್ನೇನು ಅರುಣೋದಯವಾಗಬೇಕು, ಏನಾಯಿತೋ ತಿಳಿಯುವ ಕಾತರ ನನಗೆ! . . . ಅದೋ, ಯಾರದೋ ಹಜ್ಜೆಯ ಸದ್ದು, ಗುಡಾರದ ಬಳಿ ಯಾರೋ ಹಾದು ಹೋಗುವರು . . . ತೆರೆಯ ಹಿಂದೆ ಯಾರೋ ಪಿಸುಗುಟ್ಟುತ್ತಿದ್ದಾರೆ . . . ಕೇಳು, ಕೇಳು! . . . ಏನದು?

[ಪಿಸುಮಾತಿನ ಶಬ್ದವೂ ಅವಸರದ ಹಜ್ಜೆಗಳ ದನಿಯೂ ಗುಡಾರದ ಹೊರಗಡೆ ಕೇಳಿಬರುವುದು. ಅನಂತರ, ಹೊರಗಿನಿಂದ ವೀಡಿಯೋವಿನ ಧ್ವನಿ.

**ವೀಡಿಯೊ**: (ಹೊರಗಿನಿಂದ,) ಸ್ವಾಮಿ!

**ಪ್ರಿನ್ಸಿವಲ್ಲೆ** : ಅದು ವೀಡಿಯೊ. ಬಾ, ಒಳಕ್ಕೆ! ಏನು ಸಮಾಚಾರ?

**ವೀಡಿಯೊ:** (ಗುಡಾರದ ಬಾಗಿಲಲ್ಲಿ,) ಬೇಗ, ಬೇಗ! ಸ್ವಾಮಿ, ನೀನು ತ್ವರೆಯಿಂದ ಓಡಿಹೋಗಬೇಕು! ಒಂದು ಕ್ಷಣವೂ ಕಳೆಯಬೇಡ! ಫ್ಲಾರೆನ್ಸಿನ ಎರಡನೆಯ ನಿಯೋಗಿಯಾದ ಮಾನ್ಯ ಮಾಲಡ್ಯೂರ . . .

**ಪ್ರಿನ್‌ಸಿವಲ್ಲೆ:** ಅವನು ಬಿಬ್ಬಿಯೇನದ ಬಳಿಯಿದ್ದ . . .

**ವೀಡಿಯೊ:** ಅವನು ಹಿಂದಿರುಗಿ ಬಂದಿದ್ದಾನೆ . . . ಫ್ಲಾರೆನ್ಸಿನ ಆರುನೂರು ಸೈನಿಕರು ಅವನೊಡನೆ ಇದ್ದಾರೆ . . . ಅವರು ಹಾಯ್ದುದನ್ನು ಕಂಡೆ . . . ಪಾಳೆಯದಲ್ಲಿ ಕೋಲಾಹಲವೆದ್ದಿದೆ . . . ಅವನು ಆಜ್ಞೆಗಳನ್ನು ತಂದಿದ್ದಾನೆ . . . ನಿನ್ನನ್ನು ರಾಜದ್ರೋಹಿಯೆಂದು ಸಾರುತ್ತಿದ್ದಾನೆ . . . ಅವನು ಟ್ರಿವಲ್ಸಿಯೋವನ್ನು ಅರಸುತ್ತಿದ್ದಾನೆ, ನೀನು ಇನ್ನೂ ಇಲ್ಲಿರುವಾಗಲೇ ಅವನನ್ನು ಇವನು ಪತ್ತೆಮಾಡಿದರೆ . . . .

**ಪ್ರಿನ್‌ಸಿವಲ್ಲೆ:** ಬಾ, ವನ್ನ . . .

**ವನ್ನ:** ನಾನು ಎಲ್ಲಿಗೆ ಹೋಗಲಿ ?

**ಪ್ರಿನ್‌ಸಿವಲ್ಲೆ:** ವೀಡಿಯೊ, ನನಗೆ ನಂಬಿಕೆಯಿರುವ ಇನ್ನಿಬ್ಬರೊಡನೆ, ನಿನ್ನನ್ನು ಪೀಸಾಕ್ಕೆ ಕರೆದುಕೊಂಡು ಹೋಗುವನು . . .

**ವನ್ನ:** ಮತ್ತೆ, ನೀನು, ನೀನು ಏನು ಮಾಡುವೆ ?

**ಪ್ರಿನ್‌ಸಿವಲ್ಲೆ:** ಗೊತ್ತಿಲ್ಲ. ಅದು ಅಷ್ಟೇನೂ ಮುಖ್ಯವಲ್ಲ. ಜಗತ್ತು ವಿಶಾಲವಾಗಿದೆ—ಆಶ್ರಯ ಪಡೆಯುತ್ತೇನೆ.

**ವೀಡಿಯೊ:** ಓ, ಸ್ವಾಮಿ, ಜೋಪಾನ! ನಗರದ ಸುತ್ತಿನ ಪ್ರದೇಶವೆಲ್ಲ ಅವರ ವಶದಲ್ಲಿದೆ, ಜೊತೆಗೆ ಟಸ್ಕನಿಯ ತುಂಬ ಗೂಢಚಾರರು . . .

**ವನ್ನ:** ಪೀಸಾನಗರಕ್ಕೆ ಬಾ.

**ಪ್ರಿನ್‌ಸಿವಲ್ಲೆ:** ನಿನ್ನ ಸಂಗಡ ? . . .

**ವನ್ನ:** ಹೌದು.

**ಪ್ರಿನ್‌ಸಿವಲ್ಲೆ:** ನಾನು ಬರಲಾರೆ . . .

**ವನ್ನ:** ಕೆಲವು ದಿವಸದ ಮಟ್ಟಿಗಾದರೂ . . . ನಿನ್ನ ಸುಳುವಿನ ಅಂಟು ಮಾಸಿಹೋಗುವವರೆಗೆ . . .

**ಪ್ರಿನ್‌ಸಿವಲ್ಲೆ:** ನಿನ್ನ ಗಂಡ ಏನು ಮಾಡಿಯಾನು ? . . .

**ವನ್ನ**: ಅತಿಥಿಯನ್ನು ಸತ್ಕರಿಸುವ ಕರ್ತವ್ಯಕ್ಕೆ ಅವನು ಚ್ಯುತಿ ತರುವುದಿಲ್ಲ . . .

**ಪ್ರಿನ್‌ಸಿವಲ್ಲೆ**: ನೀನು ಹೇಳಿದಾಗ ನಿನ್ನನ್ನು ಅವನು ನಂಬುವನೊ ? . . .

**ವನ್ನ**: ನಂಬುವನು . . .— ನಂಬದೆ ಹೋದರೆ . . . ಆದರೆ, ಅವನು ನಂಬುವನು, ನಂಬಲೇಬೇಕು . . .— ಬಾ . . .

**ಪ್ರಿನ್‌ಸಿವಲ್ಲೆ**: ಒಲ್ಲೆ.

**ವನ್ನ**: ಏಕೆ ?— ಏನು ಹೆದರಿಕೆ ನಿನಗೆ ?

**ಪ್ರಿನ್‌ಸಿವಲ್ಲೆ**: ನನಗೆ ಹೆದರಿಕೆ, ನಿನಗಾಗಿ . . .

**ವನ್ನ**: ನನಗಾಗಿ ? ನಾನು ಒಂಟಿಯಾಗಿರಲಿ ಅಥವಾ ನಿನ್ನೊಡನೆ ಇರಲಿ, ನನ್ನ ಅಪಾಯ ಒಂದೇ. ನಿನಗಾಗಿ ನಾವು ಚಿಂತಿಸಬೇಕು, ಪೀಸಾವನ್ನು ಕಾಪಾಡಿದ ನಿನಗಾಗಿ. ಈಗ ಪೀಸಾ ನಿನ್ನನ್ನು ತಾನು ರಕ್ಷಿಸತಕ್ಕದ್ದು ನ್ಯಾಯ . . . ನೀನು ನನ್ನ ರಕ್ಷಣೆಯಲ್ಲಿ ಬಾ, ನಿನಗೆ ಹಾನಿಯಾಗದಂತೆ ನಾನಿದ್ದೇನೆ . . .

**ಪ್ರಿನ್‌ಸಿವಲ್ಲೆ**: ಹಾಗೇ ಆಗಲಿ: ನಾನು ನಿನ್ನ ಸಂಗಡ ಬರುತ್ತೇನೆ . . .

**ವನ್ನ**: ನಿನ್ನ ಪ್ರೇಮಕ್ಕೆ ಇದಕ್ಕಿಂತ ಉತ್ತಮವಾದ ಋಜುವಾತನ್ನು ನೀನು ನನಗೆ ಕೊಡಲಾರೆ . . . ಬಾ, ಹೊತ್ತು ಕಳೆಯುವುದು ಬೇಡ . . . ಗುಡಾರದ ಬಾಗಿಲು ತೆರೆ . . .

[ಪ್ರಿನ್‌ಸಿವಲ್ಲೆ, ವನ್ನಳನ್ನು ಹಿಂದೆ ಕರೆದುಕೊಂಡು, ಗೂಡಾರದ ಬಾಗಿಲ ಬಳಿಗೆ ನಡೆದು, ತೆರೆಯನ್ನು ಆಚೆ ನೂಕುವನು. ಜನರ ಧ್ವನಿಗಳ ತುಂಬುಮರ್ಮರಶಬ್ದ, ಆಯುಧಗಳ ಖಣಿಖಣಿ; ಅವುಗಳೆಲ್ಲದರ ಮೇಲೆ, ಆ ರಾತ್ರಿಯ ನಿಶ್ಶಬ್ದತೆಯನ್ನು ಭೇದಿಸಿಕೊಂಡು ದೂರದಿಂದ ಕೇಳಿಬರುವ ಗಂಟೆಗಳ ಸಂತೋಷದ ನಾದ. ದೂರದಾಚೆ, ದಿಗಂತದಲ್ಲಿ ಪೀಸಾ ನಗರವು ದೀಪಮಾಲೆಗಳಿಂದ ಅಲಂಕೃತವಾಗಿ ಕಾಣುವುದು. ಹಚ್ಚಿದ ಮಹಾ ಉತ್ಸವಾಗ್ನಿಗಳು ಕರಿಯ ಆಕಾಶವನ್ನು ಸಂತೋಷದಿಂದ ದೇದೀಪ್ಯಮಾನವನ್ನಾಗಿ ಮಾಡಿರುವುವು.

**ಪ್ರಿನ್‌ಸಿವಲ್ಲೆ:** ನೋಡು, ವನ್ನ, ನೋಡು!

**ವನ್ನ:** ಏನದು, ಗಯಾನೆಲ್ಲೊ? . . . ಓ, ಅರ್ಥವಾಯಿತು! ನೀನು ಮಾಡಿದುದನ್ನು ಹೊಗಳಿ ಹಾಡುವುದಕ್ಕೋಸ್ಕರ ಅವರು ಹತ್ತಿಸಿರುವ ಆನಂದದ ಅಗ್ನಿಗಳವು . . . ಕೋಟೆಯ ಗೋಡೆಗಳು ಬೆಳಗುತ್ತಿವೆ, ಬತೇರಿಗಳು ಹೊಳೆಯುತ್ತಿವೆ, ಗೋಪುರವಂತೂ ಸಂತೋಷದ ದೀವಟಿಗೆಯಂತೆ ಪ್ರಜ್ವಲಿಸುತ್ತಿದೆ. ಪ್ರಕಾಶಮಾನವಾದ ಆ ಬುರುಜುಗಳು ನಕ್ಷತ್ರಗಳಿಗೆ ಹೇಗೆ ಪಿಸುಗುಟ್ಟುತ್ತಿವೆ, ನೋಡು! . . . ನಗರದ ಬೀದಿಗಳು ತದ್ವತ್ತಾಗಿ ಗಗನದಲ್ಲಿ ಪ್ರತಿಬಿಂಬಿಸಿವೆ: ಈ ಸಂಜೆ ನಾನು ನಡೆದುಬಂದ ದಾರಿಯನ್ನು ಅಲ್ಲಿ ಗುರುತಿಸಬಲ್ಲೆ! . . . ಅದೋ, ನಗರಭವನದ ಮೇಲಿನ ಬೆಂಕಿಯ ಭುವನೇಶ್ವರಿ; ಮತ್ತೆ ಅಲ್ಲಿ, ನೆರಳುಗಳ ದ್ವೀಪದಂತೆ, ಆ ಉಪವನ ಪ್ರದೇಶ! . . . ಈಗ ತಾನೆ ಕಡೆಯ ಉಸಿರೆಳೆಯುತ್ತಿದ್ದ ಪೀಸಾನಗರದ ಪ್ರಾಣವು ಹಿಂದಕ್ಕೆ ಧಾವಿಸಿ ಬಂದು, ಸೌಧಗಳ ಶಿಖರದಿಂದ ಶಿಖರಕ್ಕೆ ನೆಗೆದು, ಅಂತರಿಕ್ಷದ ಅಂತರಗಳನ್ನು ದಾಟಿ, ಗೋಡೆಗಳ ಮೇಲೂ ನಗರದ ಸುತ್ತುಮುತ್ತಿನಲ್ಲೂ ಬಂದು ಪ್ರವಹಿಸಿ, ನಮಗೆ ಸನ್ನೆಮಾಡುತ್ತಿರುವಂತಿದೆ; ನಮ್ಮನ್ನು ಬನ್ನಿರೆಂದು ಕರೆಯುವಂತಿದೆ . . . ಕೇಳು, ಕೇಳು! . . . ಆ ಕೂಗು, ಆ ಆನಂದಾತಿರೇಕ, ಆ ಸಂತೋಷದ ಉನ್ಮಾದ, ಆ ಶಬ್ದದ ಏರಿಳಿತ, ಪೀಸಾನಗರಕ್ಕೆ ಸಮುದ್ರ ನುಗ್ಗುತ್ತಿದೆಯೋ ಎಂಬ ಹಾಗೆ! . . . ಆ ಗಂಟೆಗಳನ್ನು ಕೇಳು, ನನ್ನ ಮದುವೆಯ ಕಾಲದಲ್ಲಿ ಆದ ಅದೇ ಘಂಟಾನಾದ . . . ಆಃ, ನಾನು ಸುಖಿಯಾಗಿದ್ದೇನೆ, ಸುಖಿಯಾಗಿದ್ದೇನೆ; ನನ್ನನ್ನು ಅತ್ಯಂತವಾಗಿ ಪ್ರೀತಿಸಿರುವ ನಿನ್ನಿಂದ ನಾನು ಸುಖಿಯಾದೆನೆಂಬುದೇ ನನ್ನ ಅತ್ಯಂತವಾದ ಸುಖ! . . . ಬಾ, ನನ್ನ ಗಯಾನೆಲ್ಲೊ! (ಅವಳು ಆವನ ನೆತ್ತಿಯ ಮೇಲೆ ಮುತ್ತಿಡುವಳು.) ಈಯೊಂದು ಮುತ್ತು ಮಾತ್ರ ನಾನು ಕೊಡಬಲ್ಲೆ . . .

**ಪ್ರಿನ್‌ಸಿವಲ್ಲೆ:** ಓ, ನನ್ನ ಗಯೋವನ್ನ, ಪ್ರೇಮವು ಆಶಿಪಡಬಹುದಾದ ಪರಮೋತ್ಕೃಷ್ಟವಾದ ಚುಂಬನವಿದು! . . . ಏನಿದು, ನೀನು ನಡುಗುತ್ತಿರುವೆ; ನಿನ್ನ ಮಂಡಿಗಳು ಮಡಿಚಿಕೊಳ್ಳುತ್ತಿವೆ! . . . ಬಾ, ನನ್ನನ್ನು ಒರಗಿಕೊ, ನನ್ನ ಸುತ್ತ ಕೈಬಳಸಿ ಹಿಡಿದುಕೊ . . .

**ವನ್ನ:** ಏನೂ ಇಲ್ಲ: ತಲೆ ಸುತ್ತಿತು—ಶಕ್ತಿಮೀರಿ ಆಯಾಸವಾಯಿತು.

ನೆರವಾಗು, ನನ್ನನ್ನು ಎತ್ತಿಕೊ! ನನ್ನ ಮೊದಲನೆಯ ಸುಖದ ಹಜ್ಜೆಗಳಿಗೆ ಯಾವುದೂ ಅಡ್ಡಿಯಾಗದಿರಲಿ . . . ಉಷೆಯು ಉಪ್ಪವಡಿಸುವ ಮೊದಲು ರಾತ್ರಿ ಎಷ್ಟು ರಮಣೀಯವಾಗಿರುವುದು! . . . ಬೇಗ! ತ್ವರೆಮಾಡೋಣ, ವೇಳೆಯಾಯಿತು. ಸಂತೋಷ ಬಾಡಿಹೋಗುವ ಮೊದಲೇ ಹೋಗಿ ಸೇರ ಬೇಕು . . .

[ಅವರು ಒಟ್ಟಿಗೆ ಹೋಗುವರು, ಪ್ರಿನ್ಸಿವಲ್ಲೆ ವನ್ನಳಿಗೆ ಅವ ಲಂಬನವಾಗಿ.

## ಮೂರನೆಯ ಅಂಕ

ಗ್ವೀಡೊ ಕೊಲೊನ್ನನ ಅರಮನೆಯ ಒಂದು ರಾಯಕೋಣೆ.

ಎತ್ತರವಾದ ಕಿಟಕಿಗಳು, ಮಹಾದ್ವಾರಗಳು, ಅಮೃತಶಿಲೆಯ ಮಹಾ ಸ್ತಂಭಗಳು, ಇತ್ಯಾದಿ. ಎಡಗಡೆಗೆ, ಹಿಂಭಾಗದಲ್ಲಿ, ಒಂದು ತಾರಸಿಮಾಳಿಗೆ, ಅಲ್ಲಿಗೆ ಹತ್ತಿಬರುವುದಕ್ಕೆ ಒಂದು ದೊಡ್ಡ ಜೋಡಿಮೆಟ್ಟಲು ಸಾಲು. ಮಾಳಿಗೆಯ ಕಟಕಟೆಯ ಮೇಲೆ ಹುವ್ವು ತುಂಬಿದ ದೊಡ್ಡ ಅಲಂಕಾರ ಪಾತ್ರೆಗಳು. ಕೊಠಡಿಯ ಮಧ್ಯೆ, ಶಿಲಾಸ್ತಂಭಗಳ ನಡುವೆ, ಘನವಾದ ಅಮೃತಶಿಲೆಯ ಮೆಟ್ಟಲುಗಳು ಮಾಳಿಗೆಗೆ ಹತ್ತಿಹೋಗುವ ದಾರಿ ತೋರುತ್ತಿವೆ. ಅಲ್ಲಿಂದ ನಗರದ ಬಹುಭಾಗದ ನೋಟ ಕಂಡು ಬರುತ್ತದೆ. ಪ್ರವೇಶ — ಮಾರ್ಕೊ, ಗ್ವೀಡೊ, ಬೋರ್ಸೊ ಮತ್ತು ಟೊರೆಲ್ಲೊ.

**ಗ್ವೀಡೊ:** ನಿನ್ನ ಮಾತಿಗೆ, ಅವಳ ಮಾತಿಗೆ, ಪ್ರತಿಯೊಬ್ಬರ ಮಾತಿಗೂ ನಾನು ಕಟ್ಟುಬಿದ್ದೆ; ಈಗ ನನ್ನ ಸರದಿ ಬರಬೇಕೆಂಬುದು ನ್ಯಾಯ ಸಮ್ಮತವಾದದ್ದು. ನಾನು ಮೌನವಾಗಿದ್ದೆ, ಉಸಿರಾಡದಿದ್ದೆ, ತಲೆಮರೆಸಿಕೊಂಡಿದ್ದೆ — ತನ್ನ ಮನೆಯನ್ನು ಕಳ್ಳರು ಸೂರೆಮಾಡುತ್ತಿರುವಾಗ ಹೇಡಿಯು ತಲೆಮರೆಸಿಕೊಳ್ಳುವ ಹಾಗೆ. ಆದರೆ, ಈ ಅಧೋಗತಿಯಲ್ಲಿಯೂ ಇನ್ನೂ ನನ್ನ ಗೌರವವನ್ನು ನಾನು ಉಳಿಸಿಕೊಂಡಿದ್ದೇನೆ . . . ನೀವು ನನ್ನನ್ನು ಒಬ್ಬ ವ್ಯಾಪಾರಸ್ಥನನ್ನಾಗಿ, ಚೌಕಾಶಿ ವ್ಯಾಪಾರಿಯಾಗಿ, ಉಪಾಯದಿಂದ ಲಾಭ ಸಂಪಾದಿಸಲು ಹವಣಿಸುವವನನ್ನಾಗಿ ಮಾಡಿರುವಿರಿ . . . ಆದರೆ, ಈಗ ಉಷಃಕಾಲ ಬಂದಿದೆ . . . ನಾನು ನನ್ನ ಸ್ಥಳದಿಂದ ಕದಲಿಲ್ಲ . . . ಒಂದು ಒಪ್ಪಂದವಾಯಿತು, ನಾನು ಅದಕ್ಕೆ ಮನ್ನಣೆಕೊಡಬೇಕಾಯಿತು. ನಾನು ನಿಮ್ಮ ಆಹಾರವನ್ನು ಕೊಂಡುಕೊಡಬೇಕಾಗಿತ್ತು . . . ಈ ರಾತ್ರಿ, ಈ ಭವ್ಯವಾದ ರಾತ್ರಿ, ಕೊಳ್ಳುವವನ ಪಾಲಿನದಾಗಿತ್ತು . . . ಆಃ, ಯಾರಿಗೆ ಗೊತ್ತು, ಈ ಗೋಧಿ ಈ ಕುರಿ ಈ ಹಸುಗಳಿಗೆ ಕೊಟ್ಟ ಆ ಬೆಲೆ, ಬಹುಶಃ, ಅತಿಯಾಯಿತೋ ಏನೋ . . . ಈಗ ನೀವು ಹೊಟ್ಟೆತುಂಬ ಉಂಡಾಯಿತು,

ಅದರ ಬೆಲೆ ನಾನು ತೆತ್ತಾಯಿತು . . . ಈಗ ನಾನು ಸ್ವತಂತ್ರ, ಮತ್ತೆ ನಾನು ಯಜಮಾನ; ನನಗಾದ ಅಪಮಾನವನ್ನು ಕಿತ್ತು ಒಗೆಯುತ್ತೇನೆ! . . .

**ಮಾರ್ಕೋ :** ಮಗು, ನಿನ್ನ ಮನಸ್ಸಿನ ಇಂಗಿತಗಳನ್ನು ನಾನು ಕಾಣೆ, ನೀನು ಪಡುತ್ತಿರುವಂತಹ ದುಃಖದ ನಡುವೆ ಪ್ರವೇಶಿಸಲು ಯಾರಿಗೂ ಅಧಿಕಾರ ವಿಲ್ಲ . . . ಮಾತಿನಿಂದ ಅದು ಶಮನವಾಗುವುದು ಸಾಧ್ಯವಿಲ್ಲ; ಅಲ್ಲದೆ, ಅದ ರಿಂದ ಉಂಟಾಗಿ ನಿನ್ನ ಸುತ್ತಲೂ ಎಲ್ಲ ಕಡೆ ಬಳಸಿರುವ ಈ ಸುಖಸಂಭ್ರಮ ಗಳು ನಿನ್ನ ದುಃಖವನ್ನು ಇನ್ನಷ್ಟು ಕಹಿಮಾಡಿ, ಇನ್ನಷ್ಟು ದಾರುಣವಾಗಿ ಮಾಡುತ್ತವೆಂಬುದು ನನಗೆ ಅರ್ಥವಾಗುತ್ತದೆ . . . ನಗರವನ್ನೇನೋ ಉಳಿಸಿ ಯಾಯಿತು, ಆದರೆ ಅದಕ್ಕಾಗಿ ನೀನು ಇಷ್ಟು ಪ್ರಿಯವಾದ ಬೆಲೆ ತೆರ ಬೇಕಾಯಿತಲ್ಲಾ ಎಂದು ಪಶ್ಚಾತ್ತಾಪಪಡುವಂತೆ ಆಗುತ್ತಿದೆ; ಅದರ ಸಮಸ್ತ ಭಾರವನ್ನೂ ವಹಿಸಬೇಕಾದ ನಿನ್ನ ಎದುರಿಗೆ ನಾವು ತಲೆ ತಗ್ಗಿಸುತ್ತೇವೆ . . . ಆದರೂ, ನೆನ್ನೆಯದನ್ನು ಜ್ಞಾಪಿಸಿಕೊಳ್ಳಬಲ್ಲೆವಾದರೆ, ಈಗಲೂ ಹಾಗೆಯೆ ಮಾಡಬೇಕಾದೀತು, ಅದೇ ವ್ಯಕ್ತಿಗಳನ್ನು ಆಹುತಿ ಕೊಡಬೇಕಾದೀತು, ಅದೇ ಅನ್ಯಾಯವನ್ನೇ ನಡಸಲು ವಾದಿಸಬೇಕಾದೀತು; ಏಕೆಂದರೆ, ನ್ಯಾಯಪರ ನಾಗಿರಬೇಕೆಂದು ಇಷ್ಟಪಡುವವನು, ತಾನು ಬದುಕಿರುವಷ್ಟು ಕಾಲವೂ, ಎರಡು ಮೂರು ಬೇರೆ ಬೇರೆ ಮಟ್ಟದ ಅನ್ಯಾಯಗಳಲ್ಲಿ ಯಾವುದು ಕಡಮೆಯ ಅನ್ಯಾಯವೆಂಬುವನ್ನು ವ್ಯಸನಪಡುತ್ತಲೇ ಆರಿಸಬೇಕಾಗಿ ಬರುತ್ತದೆ . . . ನಿನಗೆ ಏನು ಹೇಳಬೇಕೋ ನಾನು ಕಾಣೆ; ಆದರೆ, ಹಿಂದೆ ನೀನು ಪ್ರೀತಿ ಯಿಂದ ಕೇಳುತ್ತಿದ್ದ ಈ ನನ್ನ ವಾಣಿಯು ಕಡೆಯ ಬಾರಿ ನಿನ್ನ ಹೃದಯವನ್ನು ಮುಟ್ಟಬಲ್ಲುದಾದರೆ, ಮಗು, ನಾನು ನಿನ್ನನ್ನು ಬೇಡಿಕೊಳ್ಳುತ್ತೇನೆ : ಕೋಪ ದಿಂದಲೂ ದುಃಖದಿಂದಲೂ ಮನಸ್ಸಿಗೆ ಬಂದುದನ್ನು ಕಣ್ಣು ಮುಚ್ಚಿಕೊಂಡು ದುಡುಕಿ ಮಾಡಬೇಡ . . . ಕೆಲವು ಅಪಾಯದ ಗಳಿಗೆಯಲ್ಲಿ ಆಡಿದ ಮಾತನ್ನು ಹಿಂದಕ್ಕೆ ತೆಗೆದುಕೊಳ್ಳುವುದು ಸಾಧ್ಯವಿಲ್ಲ, ಅಂತಹ ಗಳಿಗೆ ಕಳೆದುಹೋಗುವ ವರೆಗಾದರೂ ತಾಳಿಕೊಂಡಿರು . . . ಇನ್ನೇನು, ವನ್ನ ಬರುವಳು. ಅವಳ ವರ್ತನೆಯನ್ನು ಈ ದಿವಸ ತೂಗಿ ನೋಡಬೇಡ. ಕೈಮಿಂಚಿಹೋಗುವಂಥದು ಏನೂ ಮಾಡಬೇಡ . . . ಏಕೆಂದರೆ, ದುಃಖದ ಮಹಾಭಾರಸಾಮ್ರಾಜ್ಯಕ್ಕೆ ವಶರಾಗಿ ಮಾಡಿಬಿಡುವುದೂ ಆಡಿಬಿಡುವುದೂ ಸಹಜವಾದರೂ, ಅದನ್ನು

ಮತ್ತೆ ಅಳಿಸಲಾರೆವೆಂಬುದು ಅತ್ಯಂತ ಕ್ರೂರವಾದದ್ದು! . . . ವನ್ನ ಹಿಂದಿರುಗಿ ಬರುತ್ತಾಳೆ, ಸಂತೋಷದಿಂದ, ನಿರಾಶೆಯಿಂದ . . . ಅವಳನ್ನು ನಿಂದಿಸ ಬೇಡ . . . ಹಲವು ದಿವಸಗಳಾದ ಮೇಲೆ ಅವಳೊಡನೆ ಮಾತನಾಡಿದರೆ ಹೇಗೆ ಮಾತನಾಡುವೆಯೋ ಹಾಗೆ ಮಾತನಾಡಲು ನಿನಗೆ ಶಕ್ತಿ ಸಾಲದೆಂದು ಎನ್ನಿಸಿ ದರೆ, ಸ್ವಲ್ಪಕಾಲ ಕಳೆದು ಆದ ಮೇಲೆ ಅವಳನ್ನು ನೋಡು . . . ಏಕೆಂದರೆ, ನಾವೆಲ್ಲರೂ ಅಪರಿಹಾರ್ಯವಾದ ಶಕ್ತಿಗಳ ಕೈಗೊಂಬೆಗಳಾಗಿರುವ ಅಸಹಾಯ ಪ್ರಾಣಿಗಳು, ನಮ್ಮಲ್ಲಿ ವಯಸ್ಸು ಕಳೆದಂತೆಲ್ಲ ಎಷ್ಟೋ ಒಳ್ಳೆಯತನ, ನ್ಯಾಯ ತತ್ಪರತೆ, ಪಕ್ವವಾದ ಜ್ಞಾನ ಬಂದು ನೆಲಸುತ್ತವೆ; ಆದಕಾರಣ, ದುರ್ದೆಶೆ ಯಿಂದ ಬಗೆಗುರುಡರಾದಾಗ ನಾವು ಕಾತರದಿಂದ ಯಾವ ಮಾತುಗಳಿಗಾಗಿ ತಡಕಾಡಬೇಕೆಂದರೆ,—ಪೂರ್ತಿಯಾಗಿ ಅರ್ಥಮಾಡಿಕೊಂಡು, ಕ್ಷಮಿಸಿ, ಮತ್ತೆ ಪ್ರೀತಿಸಲು ತೊಡಗಿದಾಗ ನಾವು ಉಚ್ಚರಿಸುವ ಮಾತುಗಳನ್ನು. ಇವು ಮಾತ್ರ ಸಾರ್ಥಕವಾದ ಮಾತುಗಳು . . .

**ಗ್ವೀಡೊ :** ಮುಗಿಯಿತೊ? ಒಳ್ಳೆಯದು. ಮಧುವಿನಂದದ ಮಾತು ಗಳಿಗೆ ಈಗ ಇದು ಕಾಲವೂ ಅಲ್ಲ, ಇದನ್ನು ಕೇಳಿ ಇನ್ನೂ ಮೋಸಹೋಗುವ ವರು ಇಲ್ಲಿ ಯಾರೂ ಇಲ್ಲ . . . ಕಡೆಯ ಬಾರಿ, ಹೇಳಬೇಕಾದ್ದನ್ನು ಹೇಳಿ ಬಿಡಲಿ, ಎಂದು ಸಹಿಸಿಕೊಂಡಿದ್ದೇನೆ; ನೀನು ಇಷ್ಟು ಸಾರ್ಥಕವಾಗಿ ವ್ಯರ್ಥ ಮಾಡಿದ ನನ್ನ ಬದುಕಿಗೆ ಬದಲಾಗಿ ನಿನ್ನ ಪರಿಣತವಾದ ಪ್ರಜ್ಞೆ ಏನು ನೀಡು ವುದೋ ನೋಡಿಬಿಡೋಣವೆಂದು ನನಗೆ ಕುತೂಹಲವಿತ್ತು . . . ಅದು ಕೊಡು ವುದನ್ನು ನೋಡು! 'ತಾಳು, ಸಹಿಸು, ಒಪ್ಪಿಕೊ, ಮರೆ, ಕ್ಷಮಿಸು, ಅಳು!' ಇಷ್ಟೆ ತಾನೆ? . . . ಖಂಡಿತ ಸಾಲದು! ಇದು ಸಾಕಾಗದು! . . . ಈ ಬುದ್ಧಿ ವಂತಿಕೆಯಿಂದ ಅವಮಾನವನ್ನು ನೀಗಿಕೊಳ್ಳುವುದು ನನಗೆ ಬೇಡ! ಮಾತಿ ನಿಂದ ಇದನ್ನು ಸಾಧಿಸುವುದು ಸಾಧ್ಯವಿಲ್ಲ . . . ಇನ್ನು ನನ್ನ ಮನಸ್ಸಿನ ಇಂಗಿತಗಳು, ಅವು ಬಹು ಸುಲಭವಾದವು — ಕೆಲವು ವರ್ಷಗಳ ಹಿಂದೆ ನೀನು ನನಗೆ ಹೇಗೆ ಕಾರ್ಯಕ್ಕೆ ಪ್ರೇರಿಸುತ್ತಿದ್ದೆಯೋ ಹಾಗೆಯೆ ಕಾರ್ಯಮಾಡು ವೆನು. ಪುರುಷನೊಬ್ಬನು ವನ್ನಳನ್ನು ನನ್ನಿಂದ ಅಪಹರಿಸಿದ್ದಾನೆ; ಈ ಮನುಷ್ಯ ಇರುವವರೆಗೂ ವನ್ನ ನನ್ನವಳಲ್ಲ. ಏಕೆಂದರೆ, ನನ್ನನ್ನು ನಡಸುವ ಸೂತ್ರಗಳು ಕ್ರಿಯಾಪದ ವಿಶೇಷಣಪದಗಳನ್ನು ನಡಸುವ ಸೂತ್ರಗಳಿಗಿಂತ

ಬೇರೆಯಾದುವು, ತಿಳಿಯಿತೆ? ಪೌರುಷವಿನ್ನೂ ಸಜೀವವಾಗಿರುವವನು ಯಾವ ಮಹಾನಿಯಮಕ್ಕೆ ಬಾಗಿ ನಡೆಯುವನೋ ಅದಕ್ಕೆ ವಿಧೇಯನಾದವನು ನಾನು . . . ಈಗ ಪೀಸಾದಲ್ಲಿ ಆಹಾರವಿದೆ, ಆಯುಧಗಳಿವೆ; ತಿನ್ನಬಹುದು, ಕಾದಾಡಬಹುದು; ಒಳ್ಳೆಯದು, ನನ್ನ ಪಾಲಿನವನ್ನು ನಾನು ಕೇಳುತ್ತೇನೆ. ಈ ದಿವಸ ಮೊದಲಾಗಿ, ಪೀಸಾದ ಯೋಧರೆಲ್ಲ ನನ್ನವರು; ಅಥವಾ, ಅವರಲ್ಲಿ ಅತ್ಯುತ್ತಮರಾದವರು — ನಾನೇ ಸ್ವಂತವಾಗಿ ಆರಿಸಿ ಕರೆದು, ನನ್ನ ಸ್ವಂತ ಹಣದಿಂದ ಸಂಬಳ ಕೊಟ್ಟವರು, ಅವರು ನನ್ನವರು. ನಾನು ಪೀಸಾ ನಗರಕ್ಕೆ ಸಲ್ಲಿಸಬೇಕಾದ ಕರ್ತವ್ಯವನ್ನು ತೀರಿಸಿದ್ದೇನೆ — ಈಗ ನನಗೆ ಸಲ್ಲಿಸಬೇಕಾದ್ದನ್ನು ಸಲ್ಲಿಸಿರೆಂದು ಕೇಳುತ್ತಿದ್ದೇನೆ. ಈಗ ನನ್ನ ಸರದಿ, ನನಗೆ ನ್ಯಾಯವಾಗಿ ಸಲ್ಲಬೇಕಾದ್ದನ್ನು ಸಲ್ಲಿಸಿಹೋಗಿ ಎಂದು ನಾನು ಕೇಳುತ್ತಿರುವುದನ್ನು ನಡಸಿದ ಹೊರತು ಈ ಇವರು ಹಿಂದಕ್ಕೆ ಹೋಗಲಾಗದು . . . ಇನ್ನು ಉಳಿದದ್ದು — ವನ್ನಳನ್ನು ಕುರಿತು — ಅವಳನ್ನು ಕ್ಷಮಿಸುತ್ತೇನೆ, ಅಥವಾ ಈ ಮನುಷ್ಯನು ಇನ್ನಿಲ್ಲವಾದ ಮೇಲೆ ಅವಳನ್ನು ಕ್ಷಮಿಸುತ್ತೇನೆ . . . ಅವಳಿಗೆ ಮೋಸಮಾಡಿದಿರಿ, ಅವಳಿಗೆ ದಾರಿ ತಪ್ಪಿಸಿದಿರಿ; ಆದರೆ, ಅವಳು ಮಾಡಿದ್ದರಲ್ಲಿ ವೀರವರ್ತನೆಯಾದರೂ ಇತ್ತು . . . ಅವಳ ಮರುಕ, ಅವಳ ಆತ್ಮದ ಮಹತಿ ಇವುಗಳನ್ನು ಅತ್ಯಂತ ಹೇಯವಾದ ರೀತಿಯಲ್ಲಿ ದುರುಪಯೋಗಪಡಿಸಿಕೊಂಡಿರಿ . . . ಅದು ಹಾಗೆ ಇರಲಿ . . . ಅದನ್ನು ಮರೆಯುವುದು ಅಸಾಧ್ಯವಾಗಬಹುದು; ಆದರೆ, ಕಡೆಯ ಪಕ್ಷ, ಅವಳ ಈ ಕೃತ್ಯವು ಗತಕಾಲದ ದೂರದಲ್ಲಿ ಮೈಗರೆದು ಹೋಗಿ ಪ್ರೀತಿಯ ಕಣ್ಣಿಗೆ ಕಾಣದಂತೆ ಅವಿಸಿಹೋದರೂ ಹೋಗಬಹುದು . . . ಆದರೆ, ಒಂದು ಪ್ರಾಣಿಯುಂಟು, ಅವನನ್ನು ಮಾತ್ರ ನಾಚಿಕೆಪಡದೆ ಜುಗುಪ್ಸೆಪಡದೆ ಇನ್ನು ನೋಡುವುದು ನನಗೆ ಸಾಧ್ಯವಿಲ್ಲ . . . ಇಲ್ಲೊಬ್ಬನಿದ್ದಾನೆ, ಒಂದು ಮಹತ್ತಾದ ಉದಾತ್ತವಾದ ಸೌಭಾಗ್ಯಕ್ಕೆ ನೇತಾರನಾಗಿ ಅವಲಂಬನವಾಗಿರುವುದೇ ಅವನ ಜೀವನದ ಏಕೈಕ ಧ್ಯೇಯವಾಗಿತ್ತು. ಈಗ ಅವನು ಅದರ ಶತ್ರುವಾಗಿದ್ದಾನೆ, ಅದಕ್ಕೆ ಉಪದ್ರವವಾಗಿದ್ದಾನೆ; ಈಗ, ನಿಮ್ಮೆಲ್ಲರೆದುರಿಗೆ, ಭಯಂಕರವಾದುದಾದರೂ ನ್ಯಾಯವಾದದ್ದು ಒಂದು ನಡೆಯುತ್ತದೆ . . . ಕಳೆದುಹೋಗಿರುವ ಈ ಪ್ರಪಂಚದಲ್ಲಿ, ತನ್ನ ಸ್ವಂತ ತಂದೆಯನ್ನೇ ನಿರಾಕರಿಸಿ, ಅವನಿಗೆ ಶಾಪವಿಟ್ಟು, ಅವನನ್ನು

ದೂರ ತಳ್ಳಿ, ಅವನನ್ನು ನಿಕೃಷ್ಟವಾಗಿ ಕಂಡು, ದ್ವೇಷಿಸುವ ಮಗನನ್ನು ನೀವು ಕಾಣುವಿರಂತೆ! . . .

**ಮಾರ್ಕೊ:** ನನಗೆ ಶಾಪ ಹಾಕು, ಮಗು, ಆದರೆ ಅವಳನ್ನು ಕ್ಷಮಿಸು . . . ಇಷ್ಟು ಜೀವಗಳನ್ನು ಉಳಿಸಿರುವ ಈ ವೀರಕೃತ್ಯದಲ್ಲಿ ಕ್ಷಮಿಸ ಬಾರದ ದೋಷವೇನಾದರೂ ಇದ್ದರೆ, ಆ ಎಲ್ಲ ದೋಷವೂ ನನ್ನದೆ, ಆ ವೀರ ಮಾತ್ರ ಅವಳದೆ . . . ನನ್ನ ಬುದ್ಧಿವಾದ ಒಳ್ಳೆಯದು; ಆದರೆ, ಅದರ ಕಷ್ಟ ನಷ್ಟಗಳಲ್ಲಿ ಭಾಗಿಯಾಗದಿದ್ದ ನಾನು ಬುದ್ಧಿ ಹೇಳುವುದು ಸುಲಭವಾಗಿತ್ತು; ಆದರೆ, ಈ ದಿವಸ, ನನಗೆ ಅತ್ಯಂತ ಪ್ರಿಯವಾಗಿದ್ದುದೆಲ್ಲ ತೊರೆದು ಹೋಗು ತ್ತಿರುವಾಗ, ಆ ಬುದ್ಧಿವಾದವು ಮೊದಲಿಗಿಂತ ಈಗ ಈಗ ಇನ್ನೂ ಉತ್ತಮ ವಾಗಿ ತೋರುತ್ತದೆ . . . ನಿನಗೆ ಯುಕ್ತವೆಂದು ತೋರಿಬಂದದ್ದರಲ್ಲಿ ಮನಸ್ತಾಪ ಗೊಳ್ಳುವುದು ನನಗೆ ನ್ಯಾಯವಲ್ಲ; ನಾನು ಇನ್ನೂ ಚಿಕ್ಕವನಾಗಿದ್ದಾಗ ನಿನ್ನಂತೆಯೇ ತೀರ್ಮಾನಿಸುತ್ತಿದ್ದೆ . . . ನಾನು ಹೋಗುತ್ತೇನೆ, ಮಗು, ಇನ್ನು ಮುಂದೆ ನೀನು ನನ್ನನ್ನು ಕಾಣುವಂತಿಲ್ಲ; ನಾನು ಎದುರಿಗೆ ಇರುವುದು ನಿನಗೆ ಅಸಹ್ಯವೆಂಬುದನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಬಲ್ಲೆ, ಆದರೂ ನಿನ್ನ ಕಣ್ಣಿಗೆ ಬೀಳದಂತೆ ನಿನ್ನನ್ನು ಮತ್ತೆ ಕಾಣಲು ಪ್ರಯತ್ನಿಸುತ್ತೇನೆ . . . ನಾನು ಹೇಗೂ ಹೋಗುತ್ತೇನೆ, ನಾನು ನಿನಗೆ ಮಾಡಿರುವ ಅನ್ಯಾಯವನ್ನು ನೀನು ಕ್ಷಮಿಸುವ ಕಾಲದವರೆಗೂ ಬದುಕಿರುವ ಧೈರ್ಯ ನನಗಿಲ್ಲ; ಏಕೆಂದರೆ, ಜೀವನದ ಪ್ರಾಯದಲ್ಲಿರುವಾಗ ಕ್ಷಮೆಯೆಂಬುದು ತುಂಬ ನಿದಾನವಾಗಿ ಬರುತ್ತದೆ ಎಂಬು ದನ್ನು ನನ್ನ ಹಿಂದಿನ ಬದುಕು ನನಗೆ ಜ್ಞಾಪಿಸುತ್ತಿದೆ. ಹೀಗೆ ನಿನ್ನನ್ನು ಬಿಟ್ಟುಹೋಗುವುದರಿಂದ, ಕಡೆಯ ಪಕ್ಷ, ನಿನ್ನ ಈ ಎಲ್ಲ ದ್ವೇಷವೂ ಈ ಎಲ್ಲ ಕಹಿಯೂ ನನ್ನೊಡನೆಯೇ ಹೋಗುವುದೆಂದಾದರೂ ನನಗೆ ನಿಶ್ಚಿತವಾಗಲಿ; ಬರುವವಳು ಬಂದಾಗ ಅದು ಯಾವುದೂ ಅವಳಿಗಾಗಿ ಉಳಿದಿರುವುದಿಲ್ಲವೆಂದು ನನಗೆ ಖಚಿತವಾಗಲಿ . . . ಇದರ ಅನಂತರ, ನನ್ನದು ಒಂದೇ ಪ್ರಾರ್ಥನೆ . . . ಅವಳು ಬಂದು ನಿನ್ನ ತೋಳ ತೆಕ್ಕೆಯಲ್ಲಿ ಸೇರುವುದನ್ನು, ಕಟ್ಟಕಡೆಯ ಸಲ, ಕಾಣುವುದಕ್ಕೆ ಅವಕಾಶಕೊಡು . . . ಅನಂತರ, ಏನೂ ಗೊಣಗದೆ, ನಿನ್ನನ್ನು ಅನ್ಯಾಯಿಯೆಂದು ಎಣಿಸದೆ, ನಾನು ಹೊರಟುಹೋಗುತ್ತೇನೆ . . . ಮನುಷ್ಯರಿಗೆ ದುಃಖ ಒದಗಿದಾಗ, ಅವರಲ್ಲಿ ಅತ್ಯಂತ ವಯಸ್ಸಾದವನು

ತನ್ನಿಂದ ಹೊರಲು ಸಾಧ್ಯವಾದಷ್ಟನ್ನೆಲ್ಲ ವಹಿಸಿಕೊಳ್ಳುವುದು ಒಳ್ಳೆಯದು; ಏಕೆಂದರೆ, ಅವನು ಇನ್ನು ಕೆಲವು ಹಜ್ಜೆ ಎತ್ತಿ ಇಡುವುದರೊಳಗೆ, ಅವನ ಭಾರಗಳು ಕಳಚಿಬೀಳುವುವು . . .

[ಮಾರ್ಕೊ ಈ ಕಡೆಯ ಮಾತುಗಳನ್ನು ಆಡುತ್ತಿರುವಾಗಲೆ, ಅಸ್ಪಷ್ಟವಾದ ಮಹಾ ಮರ್ಮರ ಶಬ್ದವು ಹೊರಗಿನಿಂದ ಕೇಳಿಬರುತ್ತಿದೆ. ಅನಂತರ ಬರುವ ನಿಶ್ಶಬ್ದತೆಯಲ್ಲಿ ಆ ಶಬ್ದವು ಅಧಿಕವಾಗಿ, ಹತ್ತಿರ ಬಂದು, ಹೆಚ್ಚು ಹೆಚ್ಚು ಸ್ಪಷ್ಟವಾಗುತ್ತಿದೆ. ಮೊದಲು ಏನನ್ನೋ ನಿರೀಕ್ಷಿಸುವಂತೆ ಗುಜುಗುಜು, ಅನಂತರ ಒಂದು ಕೊನೆಯಿಂದ ಇನ್ನೊಂದು ಕೊನೆಗೆ ಹರಿದಾಡುವ ಜನರ ಗುಂಪಿನ ದೂರದ ಕೂಗು. ಕ್ಷಿಪ್ರದಲ್ಲಿಯೇ, ಅಸ್ಪಷ್ಟವಾದ ಆ ಕೂಗುಗಳು ರೂಪ ತಾಳುತ್ತವೆ. ಸುತ್ತಿನ ಎಲ್ಲ ಕಡೆಗಳಿಂದಲೂ, "ವನ್ನ! ವನ್ನ! ನಮ್ಮ ಮೊನ್ನ ವನ್ನ! ಮೊನ್ನ ವನ್ನಳಿಗೆ ಜಯವಾಗಲಿ! ವನ್ನ! ವನ್ನ! ವನ್ನ!" ಎಂಬ ಕೂಗು ಸಾವಿರ ಸಲ ಪುನಶ್ಚರಣವಾಗಿ ಕೇಳಬರುವುದು.

**ಮಾರ್ಕೊ:** (ಮಾಳಿಗೆಯ ಮಹಾದ್ವಾರದ ಕಡೆಗೆ ನುಗ್ಗುತ್ತ,) ಅದೋ, ವನ್ನ! . . . ಹಿಂದಿರುಗಿಬಂದಳು! . . . ಅದೋ ಅಲ್ಲಿ! . . . ಜನರು ಜಯಕಾರ ಮಾಡುತ್ತಿದ್ದಾರೆ; ಅವಳನ್ನು ಜಯಕಾರದಿಂದ ಸ್ವಾಗತಿಸುತ್ತಿದ್ದಾರೆ! ಕೇಳಿ, ಕೇಳಿ!

[ಬೋರ್ಸೊ ಮತ್ತು ಟೊರೆಲ್ಲೊ ಅವನ ಹಿಂದೆ ಮಾಳಿಗೆಗೆ ಹೋಗುವರು. ಗ್ವೀಡೊ ಒಂಟಿಯಾಗಿ, ಕಂಬವೊಂದನ್ನು ಒರಗಿ, ನೇರ ನಿಟ್ಟಿಸುತ್ತ ನಿಲ್ಲುವನು. ಅಷ್ಟು ಹೊತ್ತೂ ಹೊರಗಿನ ಧ್ವನಿ ಇನ್ನಷ್ಟು ಗಟ್ಟಿಯಾಗಿ ಬೇಗ ಬೇಗ ಹತ್ತಿರ ಬರುವುದು.

**ಮಾರ್ಕೊ:** (ಮಾಳಿಗೆಯ ಮೇಲೆ,) ಆಃ, ನೋಡಿ! ಚೌಕ, ಬೀದಿಗಳು, ಕಿಟಕಿಗಳು, ಮರಗಳು, ಎಲ್ಲವೂ ಬೀಸುವ ತಲೆಗಳಿಂದಲೂ ತೋಳುಗಳಿಂದಲೂ ಕಪ್ಪು ಕಟ್ಟಿವೆ! ಛಾವಣಿಗಳು, ಹೆಂಚುಗಳು, ಎಲೆಗಳು ಎಲ್ಲವೂ ಮನುಷ್ಯರಾದಂತೆ ತೋರುತ್ತಿವೆ! . . . ಆದರೆ, ವನ್ನ ಎಲ್ಲಿ? . . . ನನ್ನ ಕಣ್ಣಿಗೆ ಒಂದು ಮುಚ್ಚಿಕೊಳ್ಳುವ ಬಿಚ್ಚಿಕೊಳ್ಳುವ ಮೋಡ ಮಾತ್ರ ಕಾಣುತ್ತಿದೆ . . . ನನ್ನ ಈ ಮಂದವಾದ ಕಣ್ಣು ನನಗೆ ಮೋಸಮಾಡಿ, ನನ್ನ ಪ್ರೀತಿಗೆ ದ್ರೋಹ ಮಾಡುತ್ತಿದೆ . . . ಮುಪ್ಪಿನಿಂದಲೂ ಕಣ್ಣೀರಿನಿಂದಲೂ

ಇವು ಕುರುಡಾಗುತ್ತಿವೆ . . . ನೋಡಲು ಹಾತೊರೆಯುತ್ತಿರುವ ಒಂದು ಪ್ರಾಣಿಯನ್ನು ಇವು ಕಾಣಲಾರವು . . . ಎಲ್ಲಿ ಅವಳು, ಅವಳೆಲ್ಲಿ ? . . . ಅವಳನ್ನು ಕಾಣಲು ಯಾವ ಕಡೆ ಹೋಗಬೇಕು ? . . .

**ಬೋಸ್ಸೊರ್ :** (ಅವನನ್ನು ಹಿಂದಕ್ಕೆ ತಡೆದು,) ಬೇಡ ; ಕೆಳಗೆ ಹೋಗುವುದು ಬೇಡ, ಜನವೆಲ್ಲ ಉನ್ಮತ್ತರಾಗಿದ್ದಾರೆ, ಎಲ್ಲ ಹತೋಟಿ ತಪ್ಪಿಹೋಗಿದೆ. ಸಂತೋಷದ ಉದ್ರೇಕದಿಂದ ಅವರಿಗೆ ಹುಚ್ಚು ಹಿಡಿದುಹೋಗಿದೆ, ಹೆಂಗುಸರು ಮೂರ್ಛೆ ಹೋಗುತ್ತಿದ್ದಾರೆ, ಗಂಡಸರನ್ನು ತುಳಿದುಹಾಕುತ್ತಿದ್ದಾರೆ ! . . . ಅಲ್ಲದೆ, ಹೋಗುವುದು ವ್ಯರ್ಥ ; ಅವಳೇ ಬಂದಳು, ಅದೊ ಅಲ್ಲಿ, ಅದೊ ಅಲ್ಲಿ ! . . . ನೋಡು, ತಲೆ ಎತ್ತಿದಳು ! . . . ನಮ್ಮನ್ನು ನೋಡಿದಳು . . . ನಮ್ಮ ಕಡೆಗೆ ತ್ವರೆಯಿಂದ ಬರುತ್ತಿದ್ದಾಳೆ ! ಆಃ, ಮೇಲೆ ನೋಡಿ, ನಸುನಗುತ್ತಿದ್ದಾಳೆ ! . . .

**ಮಾರ್ಕೊ :** ನಿನಗೆ ಅವಳು ಕಾಣಿಸುತ್ತಾಳಾದರೂ ನಾನು ಕಾಣಲಾರೆ . . . ನನ್ನ ಈ ಅವಸಾನಕಾಲದ ಕಣ್ಣುಗಳು ಏನನ್ನೂ ಸ್ಪಷ್ಟವಾಗಿ ಕಾಣಲಾರವು ! . . . ನನಗೆ ಇಷ್ಟುಮಟ್ಟಿಗೆ ಕಲಿಸಿಕೊಟ್ಟ ಈ ಮುಪ್ಪನ್ನು ಈಗ ಮೊದಲ ಬಾರಿ ಶಪಿಸುತ್ತೇನೆ — ಇದು ಒಂದು ವಸ್ತುವನ್ನು ನನ್ನಿಂದ ಮರೆಮಾಡುತ್ತಿದೆಯೆಂದು ! . . . ಆದರೆ, ಅವಳನ್ನು ಕಾಣಬಲ್ಲವರು ನೀವು ಹೇಳಿ, ಅವಳು ಹೇಗೆ ಕಾಣುತ್ತಿದ್ದಾಳೆ ? . . . ಅವಳ ಮುಖ ಕಾಣಬರುತ್ತಿದೆಯೆ ?

**ಬೋಸ್ಸೊರ್ :** ವಿಜಯಶಾಲಿಯಾಗಿ ಬರುತ್ತಿದ್ದಾಳೆ . . . ಜನಗಳ ಮೇಲೆ ಬೆಳಕು ಬೀರುವಂತೆ ಕಾಣುತ್ತಿದ್ದಾಳೆ . . .

**ಟೊರೆಲ್ಲೊ :** ಆದರೆ, ಅವಳ ಪಕ್ಕದಲ್ಲಿ ನಡೆದುಬರುತ್ತಿರುವವನು ಯಾರು ?

**ಬೋಸ್ಸೊರ್ :** ನನಗೆ ತಿಳಿಯದು . . . ಅವನನ್ನು ನಾನು ಎಂದೂ ನೋಡಿಲ್ಲ, ಮುಖ ಮುಚ್ಚಿಕೊಳ್ಳುತ್ತಾನೆ . . .

**ಮಾರ್ಕೊ :** ಕೇಳು, ಹೇಗೆ ಕಿರಿಚುತ್ತಾರೆ ! . . . ಅರಮನೆಯೆಲ್ಲ ಅದಿರುತ್ತಿದೆ ; ಅಲಂಕಾರಪಾತ್ರೆಗಳಿಂದ ಹೂಗಳು ಮೆಟ್ಟಿಲ ಮೇಲೆ ಬೀಳುತ್ತಿವೆ . . . ನೆಲಕ್ಕೆ ಹಾಸಿರುವ ಚಪ್ಪಡಿಗಳು ಕೂಡ ಅಡಿಯಿಂದ ಮೇಲೆದ್ದು,

ಈ ಅತಿಶಯವಾದ ಸಂತೋಷದಲ್ಲಿ ನಮ್ಮನ್ನೂ ಕೊಚ್ಚಿಕೊಂಡು ಹೋಗುವಂತೆ ತೋರುತ್ತಿದೆ . . . ಆಃ, ಈಗ ಸ್ವಲ್ಪ ಕಾಣಿಸುತ್ತಿದೆ . . . ಬಾಗಿಲ ಹತ್ತಿರ ಬಂದರು ! . . . ಜನರ ಗುಂಪು ದಾರಿ ಬಿಡುತ್ತಿದೆ . . .

**ಬೋರ್ಸೊ:** ಹೌದು, ವನ್ನಳಿಗಾಗಿ ದಾರಿ ಬಿಡುತ್ತಿದ್ದಾರೆ. ಮಾರ್ಗ ಮಾಡಿಕೊಡುತ್ತಿದ್ದಾರೆ, ವಿಜಯದ ಮಾರ್ಗವನ್ನು, ಪ್ರೇಮದ . . . ಅವಳ ಮಾರ್ಗದಲ್ಲಿ ಹೂಗಳನ್ನೂ ತಾಳೆಯೆಲೆಗಳನ್ನೂ ಆಭರಣಗಳನ್ನೂ ಎರಚು ತ್ತಿದ್ದಾರೆ . . . ತಾಯಂದಿರು ತಮ್ಮ ಮಕ್ಕಳನ್ನು ಅವಳು ಸ್ಪರ್ಶಿಸಬೇಕೆಂದು ಮುಂದೊಡ್ಡುತ್ತಿದ್ದಾರೆ; ಅವಳ ಪಾದಗಳು ತುಳಿದುಹೋದ ಕಲ್ಲುಗಳನ್ನು ಜನರು ಬಗ್ಗಿ ಮುತ್ತಿಡುತ್ತಿದ್ದಾರೆ . . . ಜೋಪಾನ, ಅವರು ತೀರ ಹತ್ತಿರ ವಾದರು. ಸಂತೋಷದಿಂದ ಉನ್ಮತ್ತರಾಗಿದ್ದಾರೆ . . . ಅವರು ಈ ಮೆಟ್ಟಲು ಗಳನ್ನು ಮುಟ್ಟಿದರೆ, ನಾವೆಲ್ಲರೂ ಕೊಚ್ಚಿಹೋಗುತ್ತೇವೆ . . . ಆಃ, ಒಳ್ಳೆಯ ದಾಯಿತು! ಅವರು ಒಳಗೆ ಬರದಂತೆ ತಡೆಯಲು ಕಾವಲಿನವರು ಆ ಕಡೆ ಯಿಂದ ನುಗ್ಗುತ್ತಿದ್ದಾರೆ! . . . ಇನ್ನೂ ಸಮಯವಿದ್ದರೆ, ಬಾಗಿಲುಗಳನ್ನು ಮುಚ್ಚಿ ಜನರನ್ನು ಹೊರಗೇ ತಡೆಯುವಂತೆ ಆಜ್ಞೆಮಾಡುತ್ತೇನೆ . . .

**ಮಾರ್ಕೊ:** ಬೇಡ, ಬೇಡ! ಸಂತೋಷವು ಜನರ ಹೃದಯಗಳಲ್ಲಿ ಹೇಗೆ ಅರಳುತ್ತಿದೆಯೋ ಹಾಗೆಯೇ ಇಲ್ಲಿಯೂ ಅರಳಲಿ! ಅದು ಅವರ ವಿಶಾಲ ವಾದ ಪ್ರೀತಿ ವ್ಯಕ್ತವಾಗುವ ರೀತಿ—ಅದು ಇಷ್ಟಬಂದಂತೆ ಮಾಡಲಿ, ಬಿಡು! ಅವರೂ ಸಾಕಷ್ಟು ದುಃಖಪಟ್ಟಿದ್ದಾರೆ! . . . ಈಗ ಉದ್ಧಾರ ಬಂದಿರುವಾಗ, ಯಾವ ಅಡ್ಡಿಯೂ ಅವರನ್ನು ತಡೆದು ತಳ್ಳದಿರಲಿ! ಆಃ, ನಿರ್ಭಾಗ್ಯರಾದರೂ ಧೀರರಾದ ನನ್ನ ಪುರಜನರೆ, ನನಗೂ ಸಂತೋಷದಿಂದ ಮದವುಕ್ಕಿದೆ, ನಿಮ್ಮ ಧ್ವನಿಗೆ ನನ್ನದನ್ನೂ ಸೇರಿಸುತ್ತೇನೆ! . . . ಆಃ, ವನ್ನ, ನನ್ನ ವನ್ನ! ಮೆಟ್ಟಲ ಮೇಲೆ ನಾನು ನೋಡುತ್ತಿರುವುದು ನಿನ್ನನ್ನೇ ತಾನೆ? . . . (ವನ್ನಳನ್ನು ಎದುರು ಗೊಳ್ಳಲು ಮುಂದೆ ನುಗ್ಗುವನು. ಆದರೆ, ಬೋರ್ಸೊ ಮತ್ತು ಟೊರೆಲ್ಲೊ ಅವನನ್ನು ಹಿಂದಕ್ಕೆ ಹಿಡಿದು ನಿಲ್ಲಿಸಿಕೊಳ್ಳುವರು.) ಬಾ, ವನ್ನ, ಬಾ! ಇವರು ನನ್ನನ್ನು ಹಿಡಿದು ನಿಲ್ಲಿಸಿದ್ದಾರೆ! ಈ ಮಹತ್ತಾದ ಸಂತೋಷವನ್ನು ಕಂಡು ಇವರಿಗೆ ದಿಗಿಲಾಗಿದೆ! ಬಾ, ವನ್ನ, ಬಾ! . . . ಜೂಡಿತ್ತಿಗಿಂತ ಸುಂದರಿಯಾದವಳೆ, ಲ್ಯೂಕ್ರಿಸಿಗಿಂತ ಪರಿಶುದ್ಧಳಾದವಳೆ! . . . ಬಾ! . . . . ಇಲ್ಲಿ, ಈ ಪುಷ್ಪಗಳ

ಮಧ್ಯದಲ್ಲಿ! (ಬಿಳಿಶಿಲೆಯ ಪುಷ್ಪಪಾತ್ರೆಗಳ ಬಳಿಗೆ ಓಡಿ, ಬೊಗಸೆ ಬೊಗಸೆ ಹೂಗಳನ್ನು ಹಿಡಿದು ಮೆಟ್ಟಿಲ ಪಾದಗಳಿಗೆ ಎರಚುವನು.) ಬೆಳಕನ್ನು ಸಂಭ್ರಮದಿಂದ ಎದುರುಗೊಳ್ಳುವುದಕ್ಕೆ ನನ್ನ ಬಳಿಯೂ ಹೂಗಳಿವೆ! ಸೌಭಾಗ್ಯಕ್ಕೆ ಕಿರೀಟಮಾಡಿ ಕೊಡಲು ನನ್ನ ಬಳಿಯಲ್ಲಿಯೂ ಲಿಲ್ಲಿ, ಲಾರೆಲ್, ಗುಲಾಬಿ ಹೂವುಗಳಿವೆ!

[ಕೂಗು ಹೆಚ್ಚು ಹೆಚ್ಚು ಉನ್ಮತ್ತವಾಗುವುದು. ವನ್ನ, ಪ್ರಿನ್‌ಸಿವಲ್ಲೆಯ ಜೊತೆಗೂಡಿ, ಮೆಟ್ಟಿಲಿನ ತುದಿಯಲ್ಲಿ ಕಾಣಿಸಿಕೊಂಡು, ಮಾರ್ಕೋವಿನ ತೋಳುಗಳೊಳಗೆ ಆಗುವಳು. ಜನರ ಗುಂಪು ಅರಮನೆಯ ಮೆಟ್ಟಿಲುಗಳನ್ನೂ ಮಾಳಿಗೆಯನ್ನೂ ಮುತ್ತುವುದು; ಆದರೂ, ವನ್ನ, ಪ್ರಿನ್‌ಸಿವಲ್ಲೆ, ಮಾರ್ಕೋ, ಬೋರ್ಸೋ ಮತ್ತು ಟೊರೆಲ್ಲೊ ಇವರಿಂದಾದ ಗುಂಪಿನಿಂದ ದೂರವಾಗಿಯೆ ನಿಲ್ಲುವುದು.

**ವನ್ನ:** ತಂದೆಯೆ, ನನಗೆ ಸಂತೋಷವಾಗಿದೆ . . .

**ಮಾರ್ಕೋ:** (ಅವಳನ್ನು ತಕ್ಕೈಸಿಕೊಂಡು,) ಮಗು, ನಿನ್ನನ್ನು ಪುನಃ ಕಂಡು, ನನಗೂ ಸಂತೋಷವಾಗಿದೆ! . . . ನೀರು ತುಂಬಿದ ಕಣ್ಣುಗಳಿಂದ ನಿನ್ನನ್ನು ನೋಡೋಣ . . . ಅಂತರಿಕ್ಷದ ಅಂತರಾಳದಿಂದ ಇಳಿದುಬಂದುದಕ್ಕಿಂತ ಹೆಚ್ಚಿನ ಶೋಭಾವತಿಯಾಗಿದ್ದೀಯೆ, ನಿನ್ನ ಆಗಮನದ ಹರ್ಷಧ್ವನಿಗಳು ಅಲ್ಲಿಂದ ಮೊಳಗಿಬರುತ್ತಿವೆ! . . . ಆ ದುರುಳನಾದ ಶತ್ರುವು ನಿನ್ನ ಕಣ್ಣುಗಳ ಕಾಂತಿಯನ್ನಾಗಲಿ ನಿನ್ನ ತುಟಿಗಳ ಮಂದಹಾಸವನ್ನಾಗಲಿ ಒಂದಿಷ್ಟೂ ಅಪಹರಿಸುವುದು ಸಾಧ್ಯವಾಗಿಲ್ಲ! . . .

**ವನ್ನ:** ಅಪ್ಪ, ಎಲ್ಲವನ್ನೂ ಹೇಳುತ್ತೇನೆ . . . ಆದರೆ, ಗ್ವೀಡೊ ಎಲ್ಲಿ? . . . ಅವನು ಮೊದಲು ಕೇಳತಕ್ಕದ್ದು, ಅವನನ್ನು ಮೊದಲು ಸಮಾಧಾನಗೊಳಿಸತಕ್ಕದ್ದು. ಪಾಪ, ಅವನಿಗೆ ಹೇಗೆ ತಿಳಿಯಬೇಕು?

**ಮಾರ್ಕೋ:** ವನ್ನ, ವನ್ನ, ಅವನು ಅಲ್ಲಿದ್ದಾನೆ . . . ಬಾ . . . ನನ್ನನ್ನು ಕಂಡರೆ ಅವನಿಗೆ ಆಗದು. ಅದೂ ನ್ಯಾಯವೆ, ಬಹುಶಃ. ಆದರೆ ನಿನ್ನನ್ನೂ ನಿನ್ನ ವೈಭವದ ಅಪರಾಧವನ್ನೂ ಅವನು ಕ್ಷಮಿಸುತ್ತಾನೆ; ನೀನು ಅವನ ತೋಳುಗಳಲ್ಲಿ ಮುಳುಗುವುದನ್ನು ಕಾಣಬೇಕೆಂದು, ನನ್ನ ಕೊನೆಯ ದೃಷ್ಟಿ ನಿಮ್ಮ ಪ್ರೇಮವನ್ನು ಕಾಣಬೇಕೆಂದು, ನಾನು ಹಂಬಲಿಸುತ್ತೇನೆ . . .

[ಗ್ವೀಡೊ ವನ್ನಳ ಕಡೆಗೆ ಮುಂದುವರಿಯುವನು. ಅವಳು ಇನ್ನೇನು ಮಾತನಾಡಬೇಕು— ಅವನ ತೋಳ ತೆಕ್ಕೆಗೆ ಒಳಗಾಗಬೇಕು —ಅಷ್ಟರಲ್ಲಿ ಗ್ವೀಡೊ, ಹಠಾತ್ತಾಗಿ ಅವಳನ್ನು ತಡೆದು ತಳ್ಳಿ, ತನ್ನ ಸುತ್ತಿನವರನ್ನು ಕುರಿತು ಹೇಳುವನು.

**ಗ್ವೀಡೊ :** (ದುಂದುಭಿಹೊಡೆದಂತೆ ದರ್ಪದ ಧ್ವನಿಯಿಂದ,) ಹೊರಡಿ, ಎಲ್ಲರೂ! . . .

**ವನ್ನ:** ಬೇಡ, ಭೇಡ! ಅವರು ಇಲ್ಲಿಯೇ ಇರತಕ್ಕದ್ದು! . . . ಗ್ವೀಡೊ, ನಿನಗೆ ಹೇಳಲೆಬೇಕು; ಅವರೆಲ್ಲರಿಗೂ ಹೇಳಲೆಬೇಕು . . . ಗ್ವೀಡೊ, ಕೇಳು!

**ಗ್ವೀಡೊ :** (ಅವಳನ್ನು ತಡೆದು, ಹಿಂದಕ್ಕೆ ತಳ್ಳಿ, ಉಕ್ಕುವ ಕೋಪದಿಂದ ಧ್ವನಿಯನ್ನು ಏರಿಸಿ,) ನನ್ನ ಹತ್ತಿರ ಬರಬೇಡ, ನನ್ನನ್ನು ಮುಟ್ಟಬೇಡ! (ಅಂಗಳದಲ್ಲಿ ಮುತ್ತಿರುವ ಗುಂಪಿನ ಕಡೆ ನಡೆಯುವನು, ಅವರು ಅವನೆದುರು ಹಿಮ್ಮೆಟ್ಟುವರು.) ನಾನು ಹೇಳಿದ್ದು ಕೇಳಲಿಲ್ಲವೊ? ಹೋಗಿರೆಂದು ಆಜ್ಞೆ ಮಾಡಿದೆ! ನಮ್ಮನ್ನು ಬಿಟ್ಟುಹೊರಡಿ! ನೀವು ನಿಮ್ಮ ಮನೆಗಳಲ್ಲಿ ಯಜಮಾನರು, ಆದರೆ ಇಲ್ಲಿಗೆ ನಾನು ಯಜಮಾನ. ಬೋರ್ಸೊ, ಟೊರೆಲ್ಲೊ, ಕಾವಲಿನವರನ್ನು ಬರಹೇಳಿ! ಆಃ! ಈಗ ಇದರರ್ಥ ತಿಳಿಯಿತು! ನಿಮಗೆ ನಿಮ್ಮ ಊಟ ಆಯಿತು, ಈಗ ಈ ತಮಾಷೆಯ ನೋಟವನ್ನು ನೋಡಲು ಇಚ್ಛೆಯೇನೊ! . . . ಆಗದು, ಆಗದು, ತಿನ್ನುವುದಕ್ಕೂ ಕುಡಿಯುವುದಕ್ಕೂ ಆಯಿತು! ನಿಮ್ಮೆಲ್ಲರಿಗಾಗಿ ನಾನು ತೆತ್ತಿದ್ದೇನೆ; ಅದು ಸಾಲದೇನು? ಹೊರಡಿ, ಎಂದೆ! (ಗುಂಪು ಮಾತಿಲ್ಲದೆ ಚಲಿಸಿ, ನಿದಾನವಾಗಿ ಚೆದರುವುದು.) ಯಾರಾದರೂ ಸುಳಿದಾಡುತ್ತ ಇಲ್ಲಿ ಉಳಿದೀರಿ! (ರಭಸದಿಂದ ತನ್ನ ತಂದೆಯ ತೋಳನ್ನು ಹಿಡಿದು,) ನೀನು ಕೂಡ! ನೀನು, ಎಲ್ಲರಿಗಿಂತ ಮೊದಲು! ಅಪರಾಧ ನಿನ್ನದಾದ್ದರಿಂದ, ಎಲ್ಲರಿಗಿಂತ ಮೊದಲು ನೀನು! ನಿನ್ನೆದುರಿಗೆ ನನ್ನ ಕಣ್ಣೀರನ್ನು ಬರಗೊಡುವುದಿಲ್ಲ! ಒಂಟಿಯಾಗಿರಬೇಕೆಂದು ಬಯಸುತ್ತೇನೆ. ತಿಳಿಯಬೇಕಾದ್ದನ್ನು ತಿಳಿಯುವುದಕ್ಕಾಗಿ ಸಮಾಧಿಯ ಏಕಾಂತಕ್ಕಿಂತ ಹೆಚ್ಚಿನ ಏಕಾಂತ ನನಗೆ ಬೇಕು! (ಚಲಿಸದಿರುವ ಪ್ರಿನ್ಸಿವಲ್ಲೆಯನ್ನು ಕಂಡು,) ಮತ್ತೆ, ನೀನು? . . . ಮುಸುಕಿಕ್ಕಿದ ಪ್ರತಿಮೆಯಂತೆ ನಿಂತಿರುವ ನೀನು ಯಾರು? . . . ಯಾರು ನೀನು, ಸಾವೆ? ಅಥವಾ ಅವಮಾನದ

ಅವತಾರವೆ? ಹೋಗಬೇಕೆಂದು ನಾನು ಹೇಳಿದ್ದು ಅರ್ಥವಾಗಲಿಲ್ಲವೆ? . . . (ಕಾವಲುಗಾರನೊಬ್ಬನಿಂದ ಒಂದು ರಣಗೊಡಲಿಯನ್ನು ಕಿತ್ತುಕೊಂಡು,) ಈ ರಣ ಗೊಡಲಿಯಿಂದ ನಿನ್ನನ್ನು ಆಚೆಗೆ ಅಟ್ಟಬೇಕೊ? . . . ಎಲಾ, ಕತ್ತಿಗೆ ಕೈ ಹಾಕುವೆಯೆ? . . . ನನಗೂ ಒಂದು ಕತ್ತಿಯುಂಟು, ಆದರೆ ಅದು ಬೇರೆ ಉಪಯೋಗಕ್ಕೆ . . . ಇಲ್ಲಿಂದ ಮುಂದೆ ಅದು ಒಬ್ಬನ ಮೇಲೆ ಪ್ರಯೋಗಿಸು ವುದಕ್ಕೆ ಮಾತ್ರ, ಒಬ್ಬನ ಮೇಲೆ ಮಾತ್ರ . . . ನಿನ್ನ ತಲೆಯನ್ನು ಮರೆ ಮಾಡುವ ಮುಸುಕುಗಳು ಇವು ಯಾವುವು? . . . ಮುಖವಾಡದ ಕುಣಿತಕ್ಕೆ ಇದು ಸಮಯವಲ್ಲ . . . ಏನೂ ಉತ್ತರ ಕೊಡುವುದಿಲ್ಲ . . . ನೀನು ಯಾರೆಂದು ಕೇಳುತ್ತೇನೆ? . . . ತಾಳು—

[ಎಂದು ಅವನ ಹತ್ತಿರ ಬಂದು, ಇನ್ನೇನು ಅವನ ಮುಖದ ಪಟ್ಟಿ ಗಳನ್ನು ಕಿತ್ತು ಹಾಕಬೇಕು—ವನ್ನ ಅವರ ನಡುವೆ ನುಗ್ಗಿ, ಅವನನ್ನು ತಡೆಯುವಳು.

**ವನ್ನ:** ಮುಟ್ಟಬೇಡ ಅವನನ್ನು! . . .

**ಗ್ವೀಡೊ:** (ಆಶ್ಚರ್ಯದಿಂದ,) ವನ್ನ, ಏನು, ವನ್ನ? ಎಲ್ಲಿಂದ ಬಂದಿತೆ, ಇದ್ದಕ್ಕಿದ್ದಂತೆ, ಈ ಸಾಮರ್ಥ್ಯ?

**ವನ್ನ:** ಇವನೆ, ನನ್ನನ್ನು ರಕ್ಷಿಸಿದವನು . . .

**ಗ್ವೀಡೊ:** ಹಾ! ನಿನ್ನನ್ನು ರಕ್ಷಿಸಿದ . . . ಹೊತ್ತು ಮಿಂಚಿದ ಮೇಲೆ . . . ನಿಜವಾಗಿ, ಘನವಾದ ಕಾರ್ಯ . . . ಇನ್ನೂ ಚೆನ್ನಾಗಿರುತ್ತಿತ್ತು, ಒಂದು ವೇಳೆ . . .

**ವನ್ನ:** (ಕಳವಳದಿಂದ,) ಹೇಳುವುದಕ್ಕೆ ಅವಕಾಶ ಕೊಡು, ಗ್ವೀಡೊ, ನಿನ್ನ ದಮ್ಮಯ್ಯ! ಒಂದು ಮಾತು, ಒಂದೆ ಮಾತು! . . . ಇವನು ನನ್ನನ್ನು ಕಾಪಾಡಿದ, ನನ್ನ ಗೋಜಿಗೆ ಬರಲಿಲ್ಲ, ನನಗೆ ಗೌರವ ತೋರಿದ! . . . ಈಗ ನನ್ನೊಡನೆ ಬಂದಿದ್ದಾನೆ, ನನ್ನ ರಕ್ಷಣೆಗೆ ಒಳಗಾಗಿ . . . ನಾನು ವಾಗ್ದಾನ ಮಾಡಿದ್ದೇನೆ, ನಿನ್ನ ವಾಗ್ದಾನ, ನಮ್ಮ ವಾಗ್ದಾನ! . . . ನಿನಗೆ ಈಗ ಕೋಪ ಬಂದಿದೆ, ಆದರೂ ನನ್ನ ಮಾತು ಕೇಳು; ಅಷ್ಟುಮಾತ್ರ ಕೇಳು! . . .

**ಗ್ವೀಡೊ:** ಯಾರು ಈ ಮನುಷ್ಯ?

**ವನ್ನ:** ಪ್ರಿನ್‌ಸಿವಲ್ಲೆ . . .

**ಗ್ವೀಡೊ :** ಯಾರು? . . . ಏನು? . . . ಇವನು, ಅವನೆ? ಆ ಪ್ರಿನ್ಸಿವಲ್ಲೆ!

**ವನ್ನ:** ಹೌದು, ಹೌದು! ಇವನು ನಿನ್ನ ಅತಿಥಿ! ತನ್ನನ್ನು ನಿನ್ನ ಕೈಗೆ ಒಪ್ಪಿಸಿಕೊಂಡಿದ್ದಾನೆ! ಇವನೇ ನನ್ನನ್ನು ಕಾಪಾಡಿದವನು, ಗ್ವೀಡೊ . . .

**ಗ್ವೀಡೊ :** (ಒಂದು ಕ್ಷಣ ದಿಗ್ಭ್ರಮೆಯಿಂದಿದ್ದು, ಕ್ರಮೇಣ ಉತ್ಕರ್ಷದ ತೀವ್ರತೆಯಿಂದ, ನಡುವೆ ವನ್ನ ಒಂದು ಮಾತು ಆಡಲೂ ಆಗದಂತೆ, ತೀವ್ರವಾಗಿ ಮಾತನಾಡುವನು.) ಆಃ, ಇದು, ನನ್ನ ವನ್ನ! . . . ಆಃ, ಇದು ನನ್ನ ಜೀವಕ್ಕೆ ಸ್ವರ್ಗದ ಗರ್ಭದೊಳಗಿಂದ ಬಂದ ಹಿಮದಂತಿದೆ! . . . ಆಃ, ವನ್ನ, ನನ್ನ ವನ್ನ! . . . ಹೌದು, ನೀನು ಮಾಡಿದ್ದು ಸರಿ; ಮಾಡಲೆಬೇಕಾಗಿದ್ದುದರಿಂದ, ಮಾಡುವುದಕ್ಕೆ ಇದೇ ಸರಿಯಾದ ಮಾರ್ಗ! ಆಃ, ನಿನ್ನ ಸಾಧನೋಪಾಯ ನನಗೆ ಈಗ ಅರ್ಥವಾಯಿತು! ಹೌದು, ಈಗ ಎಲ್ಲವೂ ಗೋಚರವಾಯಿತು! . . . ಆದರೆ ನನಗೆ ಗೊತ್ತಿರಲಿಲ್ಲ, ನಾನು ಊಹಿಸಲಾರದೆ ಹೋದೆ! . . . ಬೇರೆ ಹೆಂಗುಸರಾಗಿದ್ದರೆ ಇವನನ್ನು ಕೊಂದುಬಿಡುತ್ತಿದ್ದರು, ಜೂಡಿತ್ ಹಾಲೊಫರ್ನೆಸ್‌ಅನ್ನು ಕೊಂದ ಹಾಗೆ! . . . ಆದರೆ, ಇವನ ಅಪರಾಧವು ಹಾಲೊಫರ್ನೆಸಿನ ಅದಕ್ಕಿಂತ ಘೋರವಾದದ್ದು, ಆದ್ದರಿಂದ ಅದಕ್ಕಿಂತ ಹೆಚ್ಚಿನ ಪ್ರತೀಕಾರದ ಅಗತ್ಯವುಂಟು! . . . ಅದಕ್ಕಾಗಿ ಇವನನ್ನು ಇಲ್ಲಿಗೆ ಕರೆದು ತಂದೆ; ಆದ್ದರಿಂದಲೆ, ಇವನಿಗೆ ಯಾರು ಬಲಿಯಾಗಿದ್ದರೋ ಅವರ ನಡುವೆಗೇ ಇವನನ್ನು ಎಳೆದುತಂದೆ, ಅವರೇ ಇವನನ್ನು ವಧೆಮಾಡಲೆಂದು! . . . ಆಃ, ಮಹದತಿಶಯವಾದ ವಿಜಯ! . . . ಇವನು ನಿನ್ನ ಹಿಂದೆ ಬಂದ, ನಮ್ರತೆಯಿಂದ, ಮೃದುಸ್ವಭಾವದಿಂದ; ನೀನು ಕೊಟ್ಟ ಮುತ್ತುಗಳು ದ್ವೇಷದ ಮುತ್ತುಗಳೆಂದು ಇವನು ಶಂಕಿಸಲಿಲ್ಲ! . . . ಈಗ ಇಲ್ಲಿದ್ದಾನೆ, ಬೋನಿನಲ್ಲಿ ಸಿಕ್ಕಿಬಿದ್ದು! . . . ಹೌದು, ನೀನು ಮಾಡಿದ್ದು ಸರಿ! ಅಲ್ಲಿಯೇ ಇವನನ್ನು ವಧಿಸಿದ್ದರೆ, ಅವನ ಗುಡಾರದಲ್ಲಿ ಒಂಟಿಯಾಗಿರುವಾಗ, ಆ ಘೋರಾಪರಾಧದ ಅನಂತರದಲ್ಲಿ—ಅದು ಸಾಕಾಗುತ್ತಿರಲಿಲ್ಲ! . . . ಒಂದು ಸಂದೇಹ ಉಳಿಯುತ್ತಿತ್ತು, ನಾವು ಇವನನ್ನು ಕಾಣಲಾಗುತ್ತಿರಲಿಲ್ಲ . . . ಇವನ ಅಸಹ್ಯವಾದ ಒಪ್ಪಂದ ಎಲ್ಲರಿಗೂ ತಿಳಿದಿತ್ತು; ಆದ್ದರಿಂದ, ಇಂತಹ ದ್ರೋಹಕ್ಕೆ ತೆರಬೇಕಾಗುವ ಬೆಲೆ ಎಂಥದೆಂಬುದು ಎಲ್ಲರಿಗೂ ತಿಳಿಯುವುದು ಅಗತ್ಯವಾಗಿತ್ತು!

ಆದರೆ, ಇದನ್ನು ನೀನು ಹೇಗೆ ಸಾಧಿಸಿದೆ? . . . ಹೆಂಗುಸಾದವಳು ಎಂದಿಗಾದರೂ ಇಂತಹ ಉತ್ತಮೋತ್ತಮವಾದ ವಿಜಯವನ್ನು . . . ಆಃ, ನೀನೆ ಅವರಿಗೆ ಹೇಳುವೆಯಂತೆ! (ಮಾಳಿಗೆಗೆ ಧಾವಿಸಿ, ತುದಿಗಂಟಲಿಂದ ಕೂಗುವನು.) ಪ್ರಿನ್ಸಿವಲ್ಲೆ! ಪ್ರಿನ್ಸಿವಲ್ಲೆ! ಶತ್ರು ಇಲ್ಲಿದ್ದಾನೆ! ನಮಗೆ ವಶವಾಗಿದ್ದಾನೆ!

**ವನ್ನ**: (ಅವನಿಗೆ ಅಂಟಿಕೊಂಡು, ಅವನನ್ನು ಹಿಂದೆ ಹಿಡಿದಿಡಲು ಯತ್ನಿಸುತ್ತ,) ಅಲ್ಲ, ಅಲ್ಲ! ಕೇಳಿಲ್ಲಿ! ಕೇಳು, ಗ್ವೀಡೊ, ಬೇಡಿಕೊಳ್ಳುತ್ತೇನೆ, ಕೇಳು! ಗ್ವೀಡೊ, ಗ್ವೀಡೊ, ನೀನು ತಿಳಿದಿರುವುದು ತಪ್ಪು!

**ಗ್ವೀಡೊ**: (ಒದರಿ ಬಿಡಿಸಿಕೊಂಡು, ಇನ್ನೂ ಗಟ್ಟಿಯಾಗಿ ಕೂಗುತ್ತ,) ಬಿಡು, ನನ್ನ! ನೋಡುವೆಯಂತೆ! ಅವರೆಲ್ಲರಿಗೂ ತಿಳಿಯಬೇಕು, ಎಲ್ಲರಿಗೂ! (ಜನರ ಗುಂಪಿಗೆ ಕೂಗಿಹೇಳುತ್ತ,) ಹಿಂದಿರುಗಿ ಬನ್ನಿ, ನೀವು ಎಲ್ಲರೂ! ಬರಬಹುದು, ಬರಲೆಬೇಕು! . . . ನೀನು ಕೂಡ, ಬಾ ಅಪ್ಪ! ನೀನು ಮಾಡಿದ ಅನ್ಯಾಯವನ್ನು ತಿದ್ದುವುದಕ್ಕೆ ಯಾವನೋ ದೇವತೆ ಬರುವನೆಂದು ನಿರೀಕ್ಷಿಸುವಂತೆ ಕಂಬಗಳ ಮರೆಯಲ್ಲಿ ಅವಿತು ಕುಳಿತಿರುವ ನೀನೂ ಬಾ, ನನ್ನ ಸುಖವನ್ನು ನನಗೆ ಮರಳಿ ಒಪ್ಪಿಸು! ಹಿಂದಿರುಗಿ ಬಾ! ಆನಂದವೆಂದರೆ ಇದು ಆನಂದ! ಇದು ಬಹು ದೊಡ್ಡ ಪವಾಡ! ನಡೆದಿರುವುದನ್ನು ಈ ಕಲ್ಲುಗಳು ಕೂಡ ಕೇಳಬೇಕು! ಇನ್ನು ನಾನು ಮೂಲೆಗಳಲ್ಲಿ ಮುಖಮರೆಸಿ ಹೋಗಬೇಕಾದ್ದಿಲ್ಲ—ಅದೆಲ್ಲಾ ಮುಗಿದುಹೋಯಿತು—ಇನ್ನು ಮೇಲೆ ಶುದ್ಧರಿಗಿಂತಲೂ ಶುದ್ಧನಾಗಿ, ಯಾವ ನಷ್ಟವನ್ನೂ ಕಾಣದವರಿಗಿಂತ ಸಿರಿವಂತನಾಗಿ ನಾನು ಓಡಿಯಾಡಬಹುದು! ಆಃ, ಈಗ ನೀವು ನನ್ನ ವನ್ನಳಿಗೆ ಜಯಘೋಷ ಕೂಗಬಹುದು! ನಾನೂ ನಿಮ್ಮೊಡನೆ ಘೋಷಿಸುತ್ತೇನೆ, ನಿಮ್ಮೆಲ್ಲರಿಗಿಂತ ಗಟ್ಟಿಯಾಗಿ ಘೋಷಿಸುತ್ತೇನೆ!

[ಜನರು ಮಾಳಿಗೆಗೆ ತ್ವರೆಯಿಂದ ಬರುವರು. ಗ್ವೀಡೊ ಅವರನ್ನು ಅಂಗಳದೊಳಕ್ಕೆ ಎಳೆದುತರುವನು.

**ಗ್ವೀಡೊ**: ಈ ಸಲ ಒಂದು ದೃಶ್ಯ ನೋಡುವಿರಂತೆ! ಏನೇ ಆದರೂ, ನ್ಯಾಯವೆಂಬುದುಂಟು! . . . ಆಃ, ನನಗದು ಚೆನ್ನಾಗಿ ಗೊತ್ತಿದ್ದಿತಾದರೂ ಇಷ್ಟು ಶೀಘ್ರವಾಗಿ ನಡೆಯುವುದೆಂದು ನಂಬುವುದು ಸಾಧ್ಯವಾಗಿರಲಿಲ್ಲ! . . . ವರ್ಷಗಟ್ಟಲೆಯಾಗಿ ಕಳೆಯಬೇಕು ಎಂದುಕೊಂಡಿದ್ದೆ; ನಗರಗಳಲ್ಲಿ, ಕಾಡು

ಗಳಲ್ಲಿ, ಪರ್ವತಗಳಲ್ಲಿ ನನ್ನ ಶತ್ರುವನ್ನು ಹುಡುಕಿಕೊಂಡು ಆಯುಸ್ಯವನ್ನೆಲ್ಲ ವ್ಯಯಮಾಡಬೇಕಾಗುತ್ತದೆ ಎಂದುಕೊಂಡಿದ್ದೆ! ಆದರಿದೋ, ಇಲ್ಲೆ, ನನ್ನ ಎದುರಿಗೆ, ಇದೇ ಕೊಠಡಿಯಲ್ಲಿ, ಇದೇ ಮೆಟ್ಟಲ ಮೇಲೆ, ನಮ್ಮೆಲ್ಲರೆದುರಿಗೆ, ತಟಕ್ಕನೆ ಕಾಣಿಸಿಕೊಂಡಿದ್ದಾನೆ, ನೋಡಿ! ಇದು ಅಮೋಘವಾದ ಪವಾಡ! . . . ಇದರ ವಿಷಯ ಕೇಳೋಣ . . . ಇದನ್ನು ಸಾಧಿಸಿದವಳು ವನ್ನ! . . . ಈಗ, ನ್ಯಾಯ ನಡೆದೇತೀರುವುದು! (ಮಾರ್ಕೋವಿಗೆ, ಅವನ ತೋಳನ್ನು ಹಿಡಿದು,) ಆ ಮನುಷ್ಯ ಕಾಣುವುದೆ? . . .

**ಮಾರ್ಕೊ :** ಹೌದು; ಯಾರು ಅವನು?

**ಗ್ವೀಡೊ :** ಅವನನ್ನು ಈ ಮೊದಲು ನೋಡಿದ್ದೀಯೆ . . . ಅವನೊಡನೆ ಮಾತನಾಡಿದ್ದೀಯೆ . . . ನೀನು ಅವನ ಇಚ್ಛಾನುವರ್ತಿಯಾದ ದೂತ ನಾಗಿದ್ದೆ . . .

[ಪ್ರಿನ್ಸಿವಲ್ಲೆ ತನ್ನ ಮುಖವನ್ನು ಮಾರ್ಕೋವಿನ ಕಡೆಗೆ ತಿರುಗಿಸುವನು. ಅವನಿಗೆ ಅವನ ಗುರುತಾಗುವುದು.

**ಮಾರ್ಕೊ :** ಪ್ರಿನ್ಸಿವಲ್ಲೆ!

[ಜನರ ಗುಂಪಿನಲ್ಲಿ ಚಲನೆ.

**ಗ್ವೀಡೊ :** ಹೌದು, ಹೌದು, ಅವನೇ; ಏನೇನೂ ಸಂಶಯವಿಲ್ಲ . . . ಬಾ. ನೋಡು ಅವನನ್ನು, ಮುಟ್ಟು ಅವನನ್ನು! ಬಹುಶಃ, ನಿನ್ನ ಮೂಲಕ ಮತ್ತೆ ಕಳುಹಿಸುವ ಸುದ್ದಿ ಏನಾದರೂ ಇರಬಹುದು . . . ಆಃ, ಇನ್ನು ಇವನು ಆ ವೈಭವದಲ್ಲಿ ಮೆರೆಯುತ್ತಿದ್ದ ಪ್ರಿನ್ಸಿವಲ್ಲೆಯಲ್ಲ! . . . ಆದರೆ, ಇವನಿಗಾಗಿ ಮಾತ್ರ ಕರುಣೆಯೆಂಬುದಿಲ್ಲ . . . ಪ್ರಪಂಚದಲ್ಲಿ ನಾನು ಕೊಡಲಾರದ ವಸ್ತುವೊಂದನ್ನು ಇವನು ನೀಚವೂ ಘೋರವೂ ಆದ ಕುಟಿಲೋಪಾಯದಿಂದ ಕೊಂಡನಲ್ಲವೆ; ಈಗ ನನ್ನ ಬಳಿ ಬಂದಿದ್ದಾನೆ! ನ್ಯಾಯವು ಇವನನ್ನು ಇಲ್ಲಿಗೆ ಎಳೆದುತಂದಿದೆ, ನ್ಯಾಯಕ್ಕಿಂತ ಅದ್ಭುತವಾದ ಸಾಧನೋಪಾಯವು ಇವನನ್ನು ಎಳೆದುತಂದಿದೆ, ಇವನಿಗೆ ಏನು ಪ್ರತಿಫಲವನ್ನು ವಿಧಿಸುತ್ತೀಯೆ ಎಂದು ಕೇಳಲು ಬಂದಿದೆ . . . ಇದನ್ನು ಪವಾಡವೆಂದು ಕರೆಯುವುದು ಸರಿಯಲ್ಲವೆ? ಹತ್ತಿರ ಬನ್ನಿ, ಹತ್ತಿರ! ಹೆದರಬೇಡಿ, ಇವನು ತಪ್ಪಿಸಿಕೊಳ್ಳಲಾರ! ಆದರೂ, ಜೋಕೆ, ಬಾಗಿಲು ಮುಚ್ಚಿರಲಿ; ಇನ್ನೊಂದು ಪವಾಡ

ಇವನನ್ನು ನಮ್ಮ ಕೈಯಿಂದ ಕಿತ್ತುಕೊಂಡೊಯ್ಯುವುದಕ್ಕೆ ಅವಕಾಶ ಕೊಡ ಬಾರದು . . . ಈ ಕೂಡಲೆ ಇವನಿಗೆ ಏನೂ ವಿಧಿಸುವುದು ಬೇಡ . . . ಇವನು ನಿದಾನವಾಗಿ ಅನುಭವಿಸುವ ಸುಖಗಳನ್ನು ಇವನಿಗಾಗಿ ಕಾಯ್ದಿರಿಸಿರೋಣ . . . ಆಃ, ನೀವು, ನನ್ನ ಸೋದರರೆ, ನಿಮ್ಮನ್ನು ಇವನು ಎಷ್ಟು ಸಂಕಟಕ್ಕೆ ಗುರಿಮಾಡಿದನೊ; ನಿಮ್ಮನ್ನು ವಧೆಮಾಡಲು ನೋಡಿದನಲ್ಲ, ನಿಮ್ಮ ಹೆಂಡಿರು ಮಕ್ಕಳನ್ನು ಗುಲಾಮುಗಿರಿಗೆ ಮಾರಿದನಲ್ಲ, ಈಗ ಇವನನ್ನು ನೋಡಿ! ಹೌದು, ಇವನೇ ಅವನು; ಇವನು ನನ್ನವನು, ಇವನು ನಿಮ್ಮವನು, ಇವನು ಖಂಡಿತ ನಮ್ಮವನು! . . . ಇವನು ನಿಮ್ಮನ್ನು ಸಂಕಟಪಡಿಸಿದನಾದರೂ ನನ್ನ ಸಂಕಟಕ್ಕೆ ಹೋಲಿಸಿದರೆ ನಿಮ್ಮದು ಏನು ಸಂಕಟ? . . . ಕ್ಷಿಪ್ರದಲ್ಲಿಯೇ ಇವನು ನಿಮ್ಮ ಕೈಗೆ ಬರುವನು . . . ನನ್ನ ವನ್ನ ಇವನನ್ನು ನಮ್ಮ ಬಳಿಗೆ ನಡಸಿತಂದಿದ್ದಾಳೆ. ನಮ್ಮ ಪ್ರತೀಕಾರವು ನಮ್ಮ ಅವಮಾನವನ್ನು ಒರಸಿಹಾಕಲೆಂದು! . . . (ಗುಂಪನ್ನು ಉದ್ದೇಶಿಸಿ,) ಬನ್ನಿ, ನೀವೆಲ್ಲರೂ ಸಾಕ್ಷಿ! ಸಂಶಯದ ಒಂದು ನೆರಳಿಗೂ ಆಸ್ಪದವಿರಕೂಡದು . . . ಇದು ಎಂತಹ ವೀರಕಾರ್‍ಯದ ಪವಾಡ ವೆಂಬುದನ್ನು ನೀವು ಆಮೂಲಾಗ್ರವಾಗಿ ಗ್ರಹಿಸಿರುವಿರ? . . . ಆ ಮನುಷ್ಯನು ವನ್ನಳನ್ನು ನನ್ನಿಂದ ಕೊಂಡೊಯ್ದನು . . . ನಾನು ನಿಸ್ಸಹಾಯನಾಗಿದ್ದೆ, ಏನೂ ಮಾಡಲಾರದವನಾಗಿದ್ದೆ: ನೀವು ಇವಳನ್ನು ಮಾರಿದಿರಿ . . . ನಾನು ಯಾರನ್ನೂ ಶಪಿಸುತ್ತಿಲ್ಲ . . . ಆದದ್ದು ಆಯಿತು . . . ನನ್ನ ನಿರ್ಭಾಗ್ಯ ಸುಖಕ್ಕಿಂತ ನಿಮ್ಮ ಜೀವನವನ್ನು ಆಯ್ದುಕೊಳ್ಳುವ ಹಕ್ಕು ನಿಮಗಿತ್ತು . . . ಆದರೆ, ಪ್ರೀತಿಯನ್ನು ಸಂಹಾರಮಾಡಿದ ವಸ್ತುವಿನಿಂದಲೇ ಅದನ್ನು ಮತ್ತೊಮ್ಮೆ ಪುನರುಜ್ಜೀವನಗೊಳಿಸುವುದನ್ನು ವನ್ನ, ನನ್ನ ವನ್ನ, ಬಲ್ಲಳು . . . ನೀವು ನಾಶಮಾಡಿದಿರಿ; ಇವಳು ಮತ್ತೆ ಸೃಷ್ಟಿಸಿದ್ದಾಳೆ . . . ವನ್ನ ಅದನ್ನು ಸಾಧಿಸಿದ್ದಾಳೆ! . . . ಇವಳು ಹಿರಿಮೆಯಲ್ಲಿ ಲ್ಯೂಕ್ರೆಸಿಗಿಂತ, ಜೂಡಿತ್ತಿಗಿಂತ ಹೆಚ್ಚಿನವಳು; ಲ್ಯೂಕ್ರೆಸಿ ತನ್ನನ್ನು ತಾನು ಕೊಂದುಕೊಂಡಳು, ಜೂಡಿತ್ ಹಾಲೊಫರ್ನೆಸ್‌ಅನ್ನು ಕೊಂದಳು! ಆಃ, ಅದು, ಖಂಡಿತವಾಗಿಯೂ ತುಂಬ ಸಪ್ಪಗೆ, ತುಂಬ ಸುಲಭವಾಗಿ, ಯಾರಿಗೂ ಗೊತ್ತಿಲ್ಲದೆ ಹೋಗುತ್ತಿತ್ತು! . . . ಮುಚ್ಚಿದ ಗುಡಾರದಲ್ಲಿ ನಿಲ್ಲುವವಳಲ್ಲ ವನ್ನ: ಬಲಿಯನ್ನು ಜೀವಸಹಿತವಾಗಿ ನಮ್ಮ ಬಳಿಗೆ ಎಳೆದುತಂದು, ನಮ್ಮೆಲ್ಲರಿಗೂ ಇವನನ್ನು ಒಪ್ಪಿಸುತ್ತಿದ್ದಾಳೆ!

. . . ಇದನ್ನು ಹೇಗೆ ನಡಸಿದ್ದಾಳೆ? . . . ಕೇಳಿ, ಅವಳೇ ಹೇಳುತ್ತಾಳೆ! . . .

**ವನ್ನ:** ಆಗಲಿ, ಹೇಳುತ್ತೇನೆ; ಆದರೆ, ಅದು ಎಲ್ಲ ನಿನ್ನ ಎಣಿಕೆ ಗಿಂತ ಬೇರೆಯೇ ಆಗಿದೆ . . .

**ಗ್ವೀಡೊ** : (ಅವಳನ್ನು ತಡೆದು, ಅವಳನ್ನು ಆಲಿಂಗಿಸಿ,) ಎಲ್ಲಿ, ಮೊದಲು ನಿನಗೆ ಮುತ್ತಿಡೋಣ, ಇವರೆಲ್ಲರ ಎದುರಿಗೆ . . .

**ವನ್ನ**: (ಅವನನ್ನು ರಭಸದಿಂದ ಹಿಂದಕ್ಕೆ ನೂಕಿ,) ಆಗದು, ಆಗದು, ನಾನು ಹೇಳುವುದನ್ನು ಕೇಳದೆ ಹೋದರೆ ಮತ್ತೆ ಎಂದಿಗೂ ಆಗದು! ಕೇಳು, ಗ್ವೀಡೊ! ಯಾವ ಗೌರವ ಸುಖಗಳನ್ನು ನೆನೆದು ನೀನು ಬಗೆಗುರುಡನಾಗು ತ್ತಿರುವೆಯೋ ಅದಕ್ಕಿಂತ ವಾಸ್ತವವಾದ ಗೌರವವನ್ನು, ಅದಕ್ಕಿಂತ ಮಹತ್ತಾದ ಸುಖವನ್ನು ನಾನು ಕುರಿತು ಹೇಳುತ್ತೇನೆ! ಆಃ, ಅವರೆಲ್ಲರೂ ಹಿಂದಿರುಗಿ ಬಂದದ್ದು ಸಂತೋಷ! ನನ್ನ ಮಾತುಗಳನ್ನು ನೀನು ಕೇಳುವ ಮೊದಲು, ಬಹುಶಃ, ಅವರು ಕೇಳಿಯಾರು: ನಿನಗೆ ಅರ್ಥವಾಗುವ ಮೊದಲು ಅವರಿಗೆ ಅರ್ಥವಾದೀತು! ಕೇಳು, ಗ್ವೀಡೊ! . . . ನೀನು ತಿಳಿಯುವ ತನಕ ನನ್ನನ್ನು ಮುಟ್ಟಲಾಗದು . . .

**ಗ್ವೀಡೊ** : (ಅವಳ ಮಾತುಗಳನ್ನು ಅಡ್ಡಗಿಸಿ, ಪುನಃ ಅವಳನ್ನು ಆಲಿಂಗಿ ಸಲು ಯತ್ನಿಸಿ,) ಸರಿ, ಸರಿ. ನನಗೆ ಗೊತ್ತು—ಆದರೆ, ಎಲ್ಲಿ, ಮೊದಲು . . .

**ವನ್ನ**: ನಾನು ಹೇಳುವುದನ್ನು ಕೇಳು, ಎಂದೆ! ನನ್ನ ಆಯುಷ್ಯದಲ್ಲಿ ಎಂದೂ ನಾನು ಸುಳ್ಳಾಡಿದ್ದಿಲ್ಲ, ಆದರೆ ಇಂದು ಅತ್ಯಂತ ಗಂಭೀರವಾದ ಸತ್ಯವನ್ನು ನುಡಿಯುತ್ತಿದ್ದೇನೆ. ಬದುಕಿನಲ್ಲಿ ಒಮ್ಮೆ ಮಾತ್ರ ಆಡತಕ್ಕಂಥ ಇಂಥ ಸತ್ಯದ ಬೆನ್ನಿನಲ್ಲೆ ಬದುಕುಸಾವುಗಳು ಬರುತ್ತವೆ . . . ಕೇಳು; ನನ್ನ ಕಡೆ ಚೆನ್ನಾಗಿ ನೋಡು; ಈ ಹೊತ್ತಿಗೆ ಮೊದಲು ನನ್ನನ್ನು ನೀನು ಎಂದೂ ನೋಡಿಲ್ಲ, ಇದೇ ಮೊದಲನೆಯ ಬಾರಿ, ನನ್ನ ಇಷ್ಟಕ್ಕೆ ಅನುಸಾರವಾಗಿ ನನ್ನನ್ನು ನಿಜವಾಗಿಯೂ ಪ್ರೀತಿಸುವುದು ಈಯೊಂದು ಬಾರಿ ಮಾತ್ರ ಸಾಧ್ಯ, ಎಂಬಂತೆ ನನ್ನ ಕಡೆ ನೋಡು . . . ನಾವು ಅನ್ಯೋನ್ಯವಾಗಿ ಬದುಕಿದ ಬದುಕಿನ ಮೇಲೆ ಆಣೆಯಿಟ್ಟು ಈಗ ಹೇಳುತ್ತೇನೆ; ನನ್ನ ಮೇಲೆ ಆಣೆಯಿಟ್ಟು, ನಮ್ಮ ಪ್ರೀತಿಯ ಮೇಲೆ ಆಣೆಯಿಟ್ಟು! . . . ಯಾವುದನ್ನು ಬಹುಶಃ ನಂಬು ವುದಕ್ಕೇ ಸಾಧ್ಯವಿಲ್ಲವೋ ಅದನ್ನು ನಂಬುವ ಸಾಮರ್ಥ್ಯವನ್ನು ತಂದುಕೊ . . .

ನಾನು ಈ ಮನುಷ್ಯನ ವಶದಲ್ಲಿದ್ದೆ . . . ನನ್ನನ್ನು ಇವನ ವಶಕ್ಕೆ ಒಪ್ಪಿಸಿಬಿಟ್ಟಿದ್ದರು: ಇವನು ನನ್ನ ಹತ್ತಿರ ಬರಲಿಲ್ಲ, ಇವನು ನನ್ನನ್ನು ಮುಟ್ಟಲಿಲ್ಲ . . . ಸೋದರನ ಮನೆಯಿಂದ ಹೇಗೋ ಹಾಗೆ ನಾನು ಇವನ ಗುಡಾರದಿಂದ ಬಂದಿದ್ದೇನೆ . . .

**ಗ್ವೀಡೊ**: ಏಕೆ?

**ವನ್ನ**: ಏಕೆಂದರೆ, ಇವನಿಗೆ ನನ್ನಲ್ಲಿ ಪ್ರೀತಿ . . .

**ಗ್ವೀಡೊ**: ಆಃ! ನೀನು ನಮಗೆ ಹೇಳಬೇಕೆಂದಿದ್ದುದು ಇದೇ ತಾನೆ! ಇದೇಯೋ ನಡೆದ ಪವಾಡ? . . . ಹೌದು, ಹೌದು, ನೀನು ಆರಂಭ ಮಾಡಿದಾಗಲೇ ಇದು ಏನೋ ವಿಚಿತ್ರವೆಂದುಕೊಂಡೆ . . . ಏನೋ ಹೊಳೆಯಿತು, ಅದಕ್ಕೆ ನಾನು ಗಮನಕೊಡಲಿಲ್ಲ . . . ನಾನೆಂದುಕೊಂಡಿದ್ದೆ: ನೀನು ಪಟ್ಟಪಾಡೂ ಅನುಭವಿಸಿದ ಭಯವೂ . . . ಆದರೆ, ಈಗ ಇದು ಪರಿಶೀಲಿಸಬೇಕಾದದ್ದು . . . ಹಾಗಾದರೆ, ಇವನು ನಿನ್ನ ಬಳಿಗೆ ಬರಲಿಲ್ಲ, ಎನ್ನುವೆ; ನಿನ್ನನ್ನು ಇವನು ಮುಟ್ಟಲಿಲ್ಲವೆ? . . .

**ವನ್ನ**: ಇಲ್ಲ.

**ಗ್ವೀಡೊ**: ಮುತ್ತು ಕೂಡ ಇಡಲಿಲ್ಲ?

**ವನ್ನ**: ಅವನ ಹಣೆಯ ಮೇಲೆ ಒಂದು ಮುತ್ತಿಟ್ಟೆ, ಅವನು ಅದಕ್ಕೆ ಬದಲಿಟ್ಟ.

**ಗ್ವೀಡೊ**: ನೀನು ನನಗೆ ಇದನ್ನು ಹೇಳುವುದು ಸಾಧ್ಯವಾಯಿತೆ! . . . ವನ್ನ, ವನ್ನ, ಈ ಭೀಕರವಾದ ರಾತ್ರೆ ನಿನಗೆ ಹುಚ್ಚುಹಿಡಿಸಿತೇನೆ?

**ವನ್ನ**: ನಾನು ಸತ್ಯವನ್ನೆ ಹೇಳುತ್ತಿದ್ದೇನೆ.

**ಗ್ವೀಡೊ**: ಸತ್ಯ! ದೇವರೆ! ಅದನ್ನೆ, ಅದೊಂದನ್ನೆ, ನಾನು ಈಗ ಹುಡುಕುತ್ತಿರುವುದು! ಆದರೆ ಆ ಸತ್ಯ ಮನುಷ್ಯರಿಗೆ ತಕ್ಕಂತಿರಬೇಕು . . . ಏನು! ತನ್ನ ದೇಶಕ್ಕೆ ದ್ರೋಹವನ್ನು ಬಗೆದು, ತನ್ನ ಬದುಕನ್ನು ನಾಶಮಾಡಿಕೊಂಡು, ಎಲ್ಲ ಕಾಲಕ್ಕೂ ಸಮಸ್ತಲೋಕದ ವಿರೋಧವನ್ನು ಕಟ್ಟಿಕೊಂಡವನು—ನೀನು ಏಕಾಕಿಯಾಗಿ ತನ್ನ ಗುಡಾರಕ್ಕೆ ಬರಬೇಕೆಂದು ಇಷ್ಟೆಲ್ಲ ಮಾಡಿದವನು—ಇವನು ಹಣೆಯ ಮೇಲೆ ಒಂದು ಮುತ್ತು ಹೊರತಾಗಿ ಬೇರೇನೂ ಬೇಡುವುದಿಲ್ಲ; ಅದನ್ನು ನಾವು ನಂಬಬೇಕೆಂದು ಅವನೇ ಇಲ್ಲಿಗೆ ನಿನ್ನೊಡನೆ

ಬರುತ್ತಾನೆ, ಅಲ್ಲವೆ? . . . ಇಲ್ಲ, ಇಲ್ಲ; ನ್ಯಾಯವನ್ನು ಹಿಡಿಯಬೇಕು, ದುರ್ದೆಶೆ ಬಂದಾಗ ಅತಿಯಾಗಿ ಹಂಗಿಸಬಾರದು . . . ಅವನು ಕೇಳಿದ್ದು ಇಷ್ಟೇ ಆದರೆ, ನಮ್ಮ ಈ ಎಲ್ಲ ಜನರಿಗೂ ಇಷ್ಟು ಕೋಟಲೆ ಕೊಡಲು ಏನು ಕಾರಣವಿದ್ದಿತು? ನನ್ನನ್ನು ಇಂಥ ನಿರಾಶೆಯಲ್ಲಿ ಕೊಚ್ಚಿಸಿದ್ದೇಕೆ? . . . ಈ ರಾತ್ರಿಯೆಂಬುದು ಹತ್ತು ವರ್ಷಗಳಾಗಿದೆ: ನಾನು ಇದರಲ್ಲಿ ಬದುಕಿದ್ದೆ ಹೆಚ್ಚು? . . . ಆಃ, ಇವನು ಬಯಸಿದ್ದು ಇಷ್ಟು ಮಾತ್ರವಾಗಿದ್ದರೆ, ಈಯೆಲ್ಲ ಯಮ ಯಾತನೆಯಿಲ್ಲದೆಯೆ ನಮ್ಮನ್ನು ಉಳಿಸಬಹುದಾಗಿತ್ತು! . . . ದೇವತೆಗೆ ಹೇಗೋ ಹಾಗೆ, ಸಂರಕ್ಷಕನಿಗೆಂಬಂತೆ ಸ್ವಾಗತಮಾಡುತ್ತಿದ್ದೆವು! ಅಲ್ಲವೆಂಬಂತೆ ತಲೆ ಯಾಡಿಸುವೆಯ . . . ನೋಡು, ಜನರೇ ತೀರ್ಮಾನಿಸಲಿ, ಜನರೇ ಉತ್ತರ ಕೊಡಲಿ . . . (ಜನರ ಗುಂಪನ್ನು ಕುರಿತು,) ಕೇಳಿದಿರ? ಇದೆಲ್ಲವನ್ನೂ ಇವಳು ಏಕೆ ಹೇಳಿದಳೋ ನಾನು ಕಾಣೆ; ಆದರೆ, ಇವಳು ಹೇಳಿದ್ದನ್ನು ಹೇಳಿಯಾ ಯಿತು, ನೀವು ತೀರ್ಮಾನಿಸುವಿರಂತೆ . . . ಇವಳು ನಿಮ್ಮನ್ನು ರಕ್ಷಿಸಿರುವು ದರಿಂದ, ಬಹುಶಃ, ನೀವು ಇವಳ ಮಾತನ್ನು ನಂಬೀರಿ . . . ಇವಳ ಮಾತನ್ನು ನಂಬುವುದಾದರೆ, ಹೇಳಿ . . . ಇವಳಲ್ಲಿ ನಂಬಿಕೆಯಿರುವವರು ಗುಂಪಿನಿಂದ ಈಚೆ ಬಂದು ನಿಲ್ಲಿ! . . . ಅಂಥವರು ಇಲ್ಲಿ ಬರಲಿ! . . . ಅವರನ್ನು ನೋಡಲು ಕಾತರ ನನಗೆ, ಅವರು ಎಂಥ ಮನುಷ್ಯರೋ ನೋಡೋಣ!

[ಮಾರ್ಕೊ ಒಬ್ಬ ಮಾತ್ರ ಗುಂಪಿನಿಂದ ಬೇರೆಯಾಗಿ ಮುಂದೆ ಬಂದು ನಿಲ್ಲುವನು. ಮಂದವಾದ, ಕ್ಷೀಣವಾದ, ಅಸ್ಪಷ್ಟವಾದ ಮರ್ಮರಶಬ್ದ ಮಾತ್ರ ಕೇಳಿಬರುವುದು.

**ಮಾರ್ಕೊ**: (ಮುಂದೆ ನುಗ್ಗಿ,) ನಾನು ಇವಳನ್ನು ನಂಬುತ್ತೇನೆ!

**ಗ್ವೀಡೊ**: ನೀನು! ನೀನು ಇವರಿಗೆ ಒಳಗೈ . . . ಆದರೆ ಉಳಿದವರು, ಉಳಿದವರು, ಮಿಕ್ಕವರು ನಂಬುವವರು ಎಲ್ಲಿ? . . . (ವನ್ನಳನ್ನು ಕುರಿತು,) ಕೇಳಿದೆಯ? ಈ ಅಂಗಳದ ಮೂಲೆಮೂಲೆಯಿಂದ ಸಿಡಿದುಬರುವ ನಗುವಿಗೆ ಅಂಜಿಕೊಂಡು, ನೀನು ಕಾಪಾಡಿದ ಈ ಜನ ಹಿಂಜರಿಯುತ್ತಿದ್ದಾರೆ . . . ಗೊಣಗುಟ್ಟಿದ ಕೆಲವರಿಗೆ ಮುಂದೆ ಬರುವ ಧೈರ್ಯವಾಗಿಲ್ಲ. ನಾನಾದರೋ—

**ವನ್ನ**: ಅವರು ನನ್ನನ್ನು ನಂಬುವುದಕ್ಕೆ ಏನೂ ಕಾರಣವಿಲ್ಲ; ಆದರೆ ನೀನು, ನನ್ನನ್ನು ಪ್ರೀತಿಸಿದ ನೀನು!

**ಗ್ವೀಡೊ :** ಆಃ, ನಿನ್ನನ್ನು ಪ್ರೀತಿಸಿದ್ದಕ್ಕಾಗಿ ನಾನು ಕಣ್ಣಿಗೆ ಮಣ್ಣು ಹಾಕಿಕೊಳ್ಳಬೇಕು! ಆಗದು, ಆಗದು! ಈಗ ನನ್ನ ಮಾತು ಕೇಳು! ನಾನು ಶಾಂತನಾಗಿ ಹೇಳುತ್ತಿದ್ದೇನೆ, ನಾನು ಕೋಪವನ್ನು ಬಿಟ್ಟದ್ದೇನೆ . . . ನಾನು ಅತಿಯಾಗಿ ಅನುಭವಿಸಿದ್ದೇನೆ, ತಟಕ್ಕನೆ ಮುಪ್ಪಾದ ಹಾಗೆ ಎನ್ನಿಸುತ್ತಿದೆ . . . ಇಲ್ಲ, ನನಗೆ ಕೋಪವಿಲ್ಲ. ನನ್ನಲ್ಲಿ ಏನೂ ಕೋಪ ಉಳಿದಿಲ್ಲ—ಅದರ ಸ್ಥಾನಕ್ಕೆ ಬೇರೆ ಏನೋ ಬರುವುದೆಂದುಕೊಂಡಿದ್ದೇನೆ—ಮುಪ್ಪೊ, ಹುಚ್ಚೋ, ಏನೋ ಕಾಣೆ . . . ಸದ್ಯದಲ್ಲಿ ಏನನ್ನೋ ನೋಡುತ್ತಿದ್ದೇನೆ, ಹುಡುಕುತ್ತಿದ್ದೇನೆ, ನನ್ನೊಳಗೆಯೆ ಅರಸುತ್ತಿದ್ದೇನೆ, ಒಮ್ಮೆ ನನ್ನದಾಗಿದ್ದ ಸುಖವನ್ನು ಮತ್ತೆ ಕಾಣುವುದಕ್ಕಾಗಿ . . . ನನಗೆ ಒಂದು ಭರವಸೆ, ಒಂದೇ ಒಂದು ಭರವಸೆ; ಆ ಭರವಸೆ ಎಷ್ಟು ಸೂಕ್ಷ್ಮವಾದುದೆಂದರೆ, ಅದು ನನ್ನ ಹಿಡಿತಕ್ಕೆ ಸಿಕ್ಕುವುದೋ ಇಲ್ಲವೋ . . . ಒಂದು ಶಬ್ದ ಅದನ್ನು ನಾಶಮಾಡೀತು; ಆದರೂ, ನನ್ನ ಈ ನಿರಾಶೆಯಲ್ಲಿ, ನಾನು ಪ್ರಯತ್ನಪಡಲೆಬೇಕು . . . ವನ್ನ, ತಿಳಿದುಕೊಳ್ಳುವ ಮುಂಚೆ ಜನರ ಗುಂಪನ್ನು ಕರೆದದ್ದು ನನ್ನ ತಪ್ಪು . . . ಆ ನರರಾಕ್ಷಸನಿಂದ ನೀನು ಪಟ್ಟ ಪಾಡನ್ನೆಲ್ಲ ಇವರೆದುರಿಗೆ ಘೋಷಿಸಿಕೊಳ್ಳುವುದು ಎಷ್ಟು ಕಹಿಯೆಂಬುದನ್ನು ನಾನು ನೆನಪಿಡಬೇಕಾಗಿತ್ತು . . . ಹೌದು, ನಾವು ಇಬ್ಬರೇ ಇರುವವರೆಗೆ ನಾನು ತಾಳಿರಬೇಕಾಗಿತ್ತು; ಆಗ ನೀನು ನಿಜವನ್ನು ಒಪ್ಪಿಕೊಂಡಿರುವೆ, ಆ ದುರ್ಭರವಾದ ಸತ್ಯವನ್ನು ಒಪ್ಪಿಕೊಂಡಿರುವೆ. ಆದರೆ, ಅಯ್ಯೋ, ಅದನ್ನು ನಾನು ಬಲ್ಲೆ, ಉಳಿದವರು ಎಲ್ಲರೂ ಬಲ್ಲರು! ಅದನ್ನು ಮುಚ್ಚಿಟ್ಟು ಏನು ಸಾರ್ಥಕ, ವನ್ನ? . . . ಕಾಲ ಮಿಂಚಿಹೋಯಿತು . . . ಈಗ ಅದನ್ನು ಏನೂ ತಿದ್ದುವಂತಿಲ್ಲ; ಅದು ನಿನಗೂ ತಿಳಿದಿರಬೇಕು . . . ಇಂತಹ ಸಮಯಗಳಲ್ಲಿ ವಿವೇಚನಾಶಕ್ತಿಗೆ ಸಾಮರ್ಥ್ಯ ಸಾಲದಾಗುತ್ತದೆ—

**ವನ್ನ:** ನನ್ನ ಕಡೆ ನೋಡು, ಗ್ವೀಡೊ; ಈಗ ಮಾತನಾಡುತ್ತಿರುವಾಗ ನನ್ನೆಲ್ಲ ಪತಿಭಕ್ತಿ, ನನ್ನೆಲ್ಲ ಶಕ್ತಿ, ನನ್ನ ಸತ್ಯ ನನ್ನ ಕಣ್ಣಲ್ಲಿ ಉಂಟು . . . ಇದು ಸತ್ಯ, ಸತ್ಯ, ಇದನ್ನು ನಂಬು! . . . ಇವನು ನನ್ನನ್ನು ಮುಟ್ಟಲಿಲ್ಲ.

**ಗ್ವೀಡೊ:** ಒಳ್ಳೆಯದು! ಸರಿ, ಒಳ್ಳೆಯದು. ಅದು ತುಂಬ ಒಳ್ಳೆಯದು! ಈಗ ನನಗೆ ಎಲ್ಲ ತಿಳಿಯಿತು, ಈಗ ನಾನು ಎಲ್ಲವನ್ನೂ ಕಳೆದು

ಕೊಂಡೆ . . . ಹೌದು, ಇದು ಸತ್ಯ; ಅಥವಾ, ಇದು ಪ್ರೇಮ, ಎನ್ನು. ಆಃ, ನನಗೆ ಅರ್ಥವಾಯಿತು, ಇವನನ್ನು ರಕ್ಷಿಸುವುದಕ್ಕೆ ಉಪಾಯ ಹುಡುಕುತ್ತಿದ್ದೀಯೆ . . . ನಾನು ಪ್ರೀತಿಸುತ್ತಿದ್ದ ಹೆಂಗಸು ಇಷ್ಟು ಬೇಗ ಬದಲಾಗುವುದು ಸಾಧ್ಯವೆಂದು ನನಗೆ ಗೊತ್ತಿರಲಿಲ್ಲ. ಆದರೆ ಇವನನ್ನು ಉಳಿಸುವುದು ಈ ಮಾರ್ಗದಿಂದಲ್ಲ! (ದನಿಯನ್ನು ಎತ್ತಿ,) ಎಲ್ಲರೂ ಕೇಳಿ. ಕೊನೆಯ ಬಾರಿ, ಒಂದು ಪ್ರತಿಜ್ಞೆಮಾಡುತ್ತೇನೆ . . . ಈಗ ನನ್ನ ಆತ್ಮನಿಗ್ರಹಕ್ಕೆ ಮಾನುಷಾತೀತವಾದ ಪ್ರಯತ್ನ ಬೇಕು; ನನಗೆ ನನ್ನ ಸ್ವಾಧೀನ ಶಿಥಿಲವಾಗುತ್ತಿದೆ. ಒಂದು ಕಟ್ಟಕಡೆಯ ಪ್ರಯತ್ನಮಾಡುತ್ತೇನೆ, ನಾನು ಕುಸಿದುಬೀಳುವ ಮೊದಲು ಇನ್ನೂ ಒಂದು ಕ್ಷಣವುಂಟು . . . ಆ ಕ್ಷಣವನ್ನು ನಾನು ಕಳೆದುಕೊಳ್ಳುವುದಿಲ್ಲ . . . ನನ್ನ ಮಾತು ನಿಮ್ಮೆಲ್ಲರಿಗೂ ಕೇಳಿಸುವುದೊ; ಅಥವಾ ನನ್ನ ಧ್ವನಿ ತುಂಬ ಕ್ಷೀಣವಾಯಿತೊ? ಇನ್ನೂ ಹತ್ತಿರ ಬನ್ನಿ, ಇನ್ನೂ ಹತ್ತಿರ! . . . ಈ ಹೆಂಗುಸನ್ನು, ಆ ಗಂಡಸನ್ನು ಕಾಣುವಿರಲ್ಲವೆ; ಇವರಿಗೆ ಪರಸ್ಪರ ಪ್ರೀತಿ . . . ಒಳ್ಳೆಯದು ಈಗ ನಾನು ಹೇಳುವುದನ್ನು ಕೇಳಿ. ಸಾಯುವವನಿಗೆ ಔಷಧವನ್ನು ತೂಗಿ ಕೊಡುವಂತೆ ನಾನು ನನ್ನ ಮಾತುಗಳೆಲ್ಲವನ್ನೂ ರವೆತಪ್ಪದ ಹಾಗೆ ತೂಗುತ್ತಿದ್ದೇನೆ . . . ಇವರಿಬ್ಬರೂ ಇಲ್ಲಿಂದ ಹೋಗುವುದಕ್ಕೆ ನನ್ನ ಒಪ್ಪಿಗೆಯುಂಟು; ಇವರಿಗೆ ಏನೂ ಅಡ್ಡಿಯಿಲ್ಲ, ಯಾರದೂ ಆತಂಕವಿಲ್ಲ, ಯಾರೂ ಇವರ ಗೋಜಿಗೆ ಹೋಗತಕ್ಕದ್ದಲ್ಲ, ಇವರಿಗೆ ಹಾನಿಮಾಡತಕ್ಕದ್ದಲ್ಲ. ತಮಗೆ ಇಚ್ಛೆ ಬಂದದ್ದನ್ನು ಇವರು ಕೊಂಡೊಯ್ಯಬಹುದು. ಇವರು ಹೋಗುವುದಕ್ಕೆ ನಿಮ್ಮ ಗುಂಪು ಸರಿದು ದಾರಿ ಮಾಡಿಕೊಡಬೇಕು. ನಿಮಗೆ ಅದರಿಂದ ಸಂತೋಷವಾಗುವುದಾದರೆ, ಇವರ ಹಾದಿಯಲ್ಲಿ ಹೂಗಳನ್ನು ಎರಚಿ. ಇವರ ಪ್ರೀತಿ ಇವರ ಹಜ್ಜೆಯನ್ನು ಯಾವ ಕಡೆಗೆ ನಡಸಿದರೆ, ಇವರು ಆ ಕಡೆಗೆ ಹೋಗಲಿ. ಇದಕ್ಕೆ ಪ್ರತಿಯಾಗಿ ನಾನು ಕೇಳುವುದೆಲ್ಲ ಇಷ್ಟೆ: ಮೊದಲು ಈ ಹೆಂಗಸು ನನಗೆ ನಿಜವನ್ನು ಹೇಳಲಿ, ಸಾಧ್ಯವಾದ ಒಂದೇ ಒಂದು ನಿಜವನ್ನು . . . ನನ್ನ ಪಾಲಿಗೆ ಉಳಿದಿರುವುದು ಅದು ಒಂದೆ, ನಾನು ಇವಳಲ್ಲಿ ಪ್ರೀತಿಸುವುದು ಇದು ಒಂದನ್ನೆ . . . ನಾನು ಇವಳಿಗೆ ಒಪ್ಪಿಸುವ ಇದಕ್ಕೆ ಪ್ರತಿಯಾಗಿ ಈ ಸತ್ಯವನ್ನು ನನಗೆ ಸಲ್ಲಿಸಲೆಂದು ನಾನು ಕೇಳುತ್ತಿದ್ದೇನೆ . . . ಅರ್ಥವಾಯಿತೆ, ವನ್ನ? ನೀನು ಆಡಬೇಕಾದ್ದು ಒಂದೆ ಮಾತು . . . ಇಲ್ಲಿರುವವರೆಲ್ಲರೂ ಸಾಕ್ಷಿ . . .

**ವನ್ನ**: ನಾನು ಸತ್ಯವನ್ನೆ ನಿನಗೆ ಹೇಳಿದ್ದೇನೆ . . . ಇವನು ನನ್ನನ್ನು ಮುಟ್ಟಲಿಲ್ಲ . . .

**ಗ್ವೀಡೊ**: ಒಳ್ಳೆಯದು, ನೀನು ಹೇಳಿಯಾಯಿತು—ನೀನು ಇವನನ್ನು ತಪ್ಪಿತಸ್ಥನೆಂದಾಯಿತು. ಇನ್ನು ಮಾಡತಕ್ಕದ್ದೇನೂ ಇಲ್ಲ. (ಕಾವಲಿನವರನ್ನು ಕರೆದು, ಪ್ರಿನ್ಸಿವಲ್ಲೆಯನ್ನು ನಿರ್ದೇಶಿಸಿ,) ಇವನು ನನಗೆ ಸೇರಿದವನು; ಇವನನ್ನು ಕೊಂಡೊಯ್ದು ಬಂಧಿಸಿ ಇಡಿ; ಈ ಭವನದ ಅಡಿಗೆ ತೀರ ಕೆಳಗಿರುವ ಕತ್ತಲ ನೆಲಮಾಳಿಗೆಯಲ್ಲಿ ಇವನನ್ನು ನೂಕಿ. ನಾನೂ ನಿಮ್ಮ ಸಂಗಡ ಬರುತ್ತೇನೆ. (ವನ್ನಳಿಗೆ,) ನೀನು ಇವನನ್ನು ಪುನಃ ನೋಡುವಂತಿಲ್ಲ; ಆದರೆ, ನಾನು ಹಿಂದಿರುಗಿ ಬಂದಾಗ ಇವನ ಕೊನೆಯ ಮಾತುಗಳನ್ನು ನಿನಗೆ ತಿಳಿಸುತ್ತೇನೆ . . .

**ವನ್ನ**: (ಪ್ರಿನ್ಸಿವಲ್ಲೆಯನ್ನು ಹಿಡಿದು ಕೊಂಡೊಯ್ಯುತ್ತಿರುವ ಕಾವಲಿನವರ ನಡುವೆ ನುಗ್ಗಿ,) ಬೇಡ, ಬೇಡ! ನಾನು ಆಡಿದ್ದು ಸುಳ್ಳು, ಅದು ಸುಳ್ಳು! (ಗ್ವೀಡೋವನ್ನು ಕುರಿತು,) ಹೌದು, ನೀನು ಹೇಳುವುದು ಸತ್ಯ! (ಕಾವಲರನ್ನು ಆಚೆ ತಳ್ಳಿ,) ಹೊರಡಿ, ನನ್ನದನ್ನು ನೀವು ಕೊಳ್ಳಕೂಡದು! ಇವನು ನನ್ನವನು, ನನಗೆ ಸೇರಿದವನು, ನಿಮಗಲ್ಲ! ನನಗೆ ಮಾತ್ರ ಸೇರಿದವನು! ಇವನನ್ನು ಶಿಕ್ಷಿಸುವ ಭಾರ ನನ್ನದು! ಈ ಹೇಡಿಯು ನಾನು ನಿಸ್ಸಹಾಯಳಾಗಿದ್ದಾಗ, ನಿರುಪಾಯಳಾಗಿದ್ದಾಗ . . .

**ಪ್ರಿನ್ಸಿವಲ್ಲೆ**: (ಅವಳ ಧ್ವನಿಯನ್ನು ಮುಳುಗಿಸಲು ಪ್ರಯತ್ನಿಸುತ್ತ,) ಸುಳ್ಳು ಹೇಳುತ್ತಾಳೆ! ಸುಳ್ಳು ಹೇಳುತ್ತಾಳೆ! ನನ್ನನ್ನು ಉಳಿಸುವುದಕ್ಕಾಗಿ ಸುಳ್ಳು ಹೇಳುತ್ತಾಳೆ! ನಿಮಗೆ ಬೇಕಾದ ಹಾಗೆ ನನಗೆ ಚಿತ್ರಹಿಂಸೆ ಮಾಡಿ—

**ವನ್ನ**: ಮುಚ್ಚು ಬಾಯಿ! (ಗುಂಪಿನತ್ತ ತಿರುಗಿ,) ಇವನು ಹೆದರಿದ್ದಾನೆ! (ಪ್ರಿನ್ಸಿವಲ್ಲೆಯ ಕೈಗಳನ್ನು ಬಂಧಿಸುವುದಕ್ಕೆ ಎಂಬಂತೆ ಅವನನ್ನು ಸಮೀಪಿಸಿ,) ಎಲ್ಲಿ, ಬಿಗಿಯುವ ಹಗ್ಗ ಕೊಡಿ, ಸರಪಣಿ ಕೊಡಿ, ಸಂಕಲೆ ಕೊಡಿ! ಈಗ ನನ್ನ ದ್ವೇಷವನ್ನು ಒಡೆದುಹೇಳಲು ಧೈರ್ಯ ಮಾಡಿರುವುದರಿಂದ, ಇವನನ್ನು ಬಂಧಿಸಬೇಕಾದ್ದು ನಾನೆ, ಇವನನ್ನು ಇಲ್ಲಿಗೆ ಎಳೆದು ತಂದ ನಾನೇ! (ಪ್ರಿನ್ಸಿವಲ್ಲೆಯ ಕೈಗಳನ್ನು ಕಟ್ಟುತ್ತ ಅವನಿಗೆ ಪಿಸುಮಾತಿನಲ್ಲಿ,) ಸುಮ್ಮನಿರು! ಅವನಿಂದ ನಾವು ಬದುಕಿದೆವು, ಸುಮ್ಮನಿರು! ಅವನು ನಮ್ಮನ್ನು ಕೂಡಿಸಿದ್ದಾನೆ. ನಾನು

ನಿನ್ನವಳು, ನಿನ್ನನ್ನು ನಾನು ಪ್ರೀತಿಸುತ್ತೇನೆ! ನಿನ್ನನ್ನು ಪ್ರೀತಿಸುತ್ತೇನೆ, ನನ್ನ ಗಯಾನೆಲ್ಲೊ! ಈಗ ಈ ಸರಪಣಿಯಿಂದ ಬಿಗಿದರೂ, ನಾನು ಸರಿಯಾದ ಕಾವಲಿರಿಸಿ, ನಿನ್ನನ್ನು ಬಿಡಿಸುತ್ತೇನೆ! ಇಬ್ಬರೂ ಒಟ್ಟಿಗೆ ಓಡಿಹೋಗೋಣ! (ಪ್ರಿನ್ಸಿವಲ್ಲಿಯ ಬಾಯಿ ಮುಚ್ಚಿಸುವಂತೆ ಗಟ್ಟಿಯಾಗಿ ಕೂಗುತ್ತ,) ಮುಚ್ಚು ಬಾಯಿ! (ಜನರನ್ನು ಕುರಿತು,) ದಯಾಭಿಕ್ಷೆ ಬೇಡುತ್ತಿದ್ದಾನೆ! (ಅವನ ಮುಖದ ಪಟ್ಟಿಗಳನ್ನು ತೆಗೆದು,) ಇವನ ಮುಖ ನೋಡಿ; ನನ್ನ ಕಠಾರಿಯಿಂದ, ಈ ಗಾಯ ಆದದ್ದು ನನ್ನ ಕಠಾರಿಯಿಂದ! ಇವನನ್ನು ನೋಡಿ! ಈ ಹೇಡಿಯನ್ನ, ಈ ನರಪಿಶಾಚನನ್ನ! (ಪ್ರಿನ್ಸಿವಲ್ಲೆಯನ್ನು ಹಿಡಿಯುವುದಕ್ಕೆ ಕಾವಲಿನವರು ಕಾಲು ಕದಲಿಸುವುದನ್ನು ಕಂಡು,) ಕೂಡದು, ಕೂಡದು, ನಾನು ನೋಡಿಕೊಳ್ಳು ತ್ತೇನೆ, ಬಿಡಿ! ಇವನು ನನ್ನ ಕೈಗೆ ಸಿಕ್ಕಿದ ಪಶು, ನನಗೆ ಸಿಕ್ಕಿದ ಬಲಿ! ಇವನನ್ನು ಕೊಂಡು ತಂದವಳು ನಾನು! ಇವನು ನನಗೆ ಸೇರಿದವನು!

**ಗ್ವೀಡೊ**: ಇವನು ಬಂದುದೇಕೆ? ನೀನು ನನಗೆ ಸುಳ್ಳಾಡಿದ್ದೇಕೆ?

**ವನ್ನ**: (ಮಾತನಾಡಲು ತಡೆದು, ಪದಗಳನ್ನು ಆರಿಸುತ್ತ,) ಸುಳ್ಳು ಏಕೆ ಹೇಳಿದೆನೆಂದರೆ . . . ನನಗೇ ಸರಿಯಾಗಿ ತಿಳಿಯದು, ಹೇಳಬೇಕೆಂದು ಇಚ್ಛೆ ಇರಲಿಲ್ಲ . . . ಆಃ, ಒಳ್ಳೆಯದು, ಈಗ ಹೇಳಲೆಬೇಕು . . . ಕೆಲವು ವೇಳೆ ಗಳಲ್ಲಿ ನಾವು ಏನು ಮಾಡುವೆವೆಂದು ನಮಗೇ ಗೊತ್ತಿರುವುದಿಲ್ಲ, ಕತ್ತಲೆಯಲ್ಲಿ ತಡಕಾಡುತ್ತೇವೆ . . . ಸರಿ, ಮುಸುಕನ್ನು ಹರಿದೆಸೆದ ಮೇಲೆ ಈಗ ನಿನಗೆ ಗೊತ್ತಾಗುತ್ತದೆ, ನಿನಗೆ ಗೊತ್ತಾಗುತ್ತದೆ . . . ನಿನ್ನ ಪ್ರೀತಿ, ನಿನ್ನ ನಿರಾಶೆ, ಇದರ ಯೋಚನೆಯಿಂದ ನನಗೆ ದಿಗಿಲಾಗಿತ್ತು . . . ಆದರೆ ಈಗ ಹೇಳುತ್ತೇನೆ. (ಇನ್ನೂ ಶಾಂತವಾದ ಧ್ವನಿಯಿಂದ, ಇನ್ನೂ ಹೆಚ್ಚಿನ ಸ್ವಸ್ಥೈರ್ಯದಿಂದ,) ಇಲ್ಲ, ಇಲ್ಲ, ನೀನು ಹೇಳುವ ಭಾವನೆ ನನಗಿರಲಿಲ್ಲ . . . ಇಲ್ಲಿ ಈ ಜನರ ಸಂದಣಿಯ ಮಧ್ಯೆ ನಾನೂ ನೀನೂ, ನಾವಿಬ್ಬರೂ, ಹೀಗೆ ಬಹಿರಂಗವಾಗಿ ಇವನ ಮೇಲೆ ಸೇಡು ತೀರಿಸಿಕೊಳ್ಳಬೇಕೆಂದು ಇವನನ್ನು ಕರೆತರಲಿಲ್ಲ; ನನ್ನ ಭಾವನೆ, ಬಹುಶಃ, ಅಷ್ಟು ಉದಾತ್ತವಲ್ಲದಿದ್ದರೂ ನಿನ್ನಲ್ಲಿ ನನಗಿದ್ದ ಪ್ರೇಮ ನನ್ನನ್ನು ಪ್ರೇರಿಸಿತು . . . ಇವನನ್ನು ಕ್ರೂರವಾದ ಮರಣಕ್ಕೆ ಈಡುಮಾಡಬೇಕೆಂದು ಹಂಬಲಿಸಿದೆನಾದರೂ, ಆ ದುರ್ಭರವಾದ ರಾತ್ರಿಯ ದುರ್ಭರವಾದ ಸ್ಮರಣೆಯ ಭಾರದಿಂದ ನೀನು ಬದುಕಿರುವ ವರೆಗೂ ನಿನ್ನ ಮನಸ್ಸಿಗೆ ಸಂಕಟವಾಗಬಾರ

ದೆಂಬ ಕಾತರವೂ ನನಗಿತ್ತು . . . ಕತ್ತಲಲ್ಲಿ ನನ್ನ ಪ್ರತೀಕಾರವನ್ನು ತೀರಿಸಿ ಕೊಳ್ಳುವ ಉದ್ದೇಶ ನನಗಿತ್ತು . . . ನಿದಾನವಾಗಿ, ಸಾವಕಾಶವಾಗಿ ಇವನಿಗೆ ಮರಣವನ್ನು ತರಬೇಕೆಂದು . . . ಗೊತ್ತಾಯಿತೆ . . . ನಿದಾನವಾಗಿ, ಕೊಂಚ ಕೊಂಚವಾಗಿ, ಇವನ ರಕ್ತ ಹಸಿ ಹಸಿಯಾಗಿ ಬಸಿದು ಬಂದು ಇವನ ಪಾಪ ಕಾರ್ಯವನ್ನು ತೊಡೆದುಹಾಕಿದ ಮೇಲೆ ಇವನನ್ನು ಕೊಲ್ಲಬೇಕೆಂದು . . . ಈ ಭೀಕರವಾದ ಸತ್ಯ ನಿನಗೆಂದಿಗೂ ಗೊತ್ತಾಗುತ್ತಿರಲಿಲ್ಲ, ನಮ್ಮಿಬ್ಬರ ನಡುವೆ ಯಾವ ಪ್ರೇತವೂ ನಿಲ್ಲುತ್ತಿರಲಿಲ್ಲ . . . ಇದರ ಜ್ಞಾಪಕದಿಂದ ನನ್ನಲ್ಲಿ ನಿನ ಗಿರುವ ಪ್ರೇಮವು ಕಡಮೆಯಾದೀತೆಂಬ ಭಯ ನನಗೆ ಇತ್ತೆಂದು ಈಗ ಒಪ್ಪಿ ಕೊಳ್ಳುತ್ತೇನೆ . . . ಇದು ಮೌಢ್ಯವೆಂದು ಈಗ ತಿಳಿಯಿತು . . . ನೀನು ನಂಬಿಕೊಳ್ಳುವೆಯೆಂದು ನನಗೊಂದು ಹುಚ್ಚು . . . ಆದರೆ ಈಗ ಎಲ್ಲವನ್ನೂ ನೀನು ತಿಳಿಯುವೆಯಂತೆ . . . (ಜನರ ಗುಂಪನ್ನು ಕುರಿತು) ಇದೋ ಕೇಳಿ, ನಾನು ಮಾಡಿದ್ದನ್ನು ನೀವು ತೀರ್ಮಾನಿಸಿ! ನಾನು ಮೊದಲು ಏನು ಹೇಳಿ ದೆನೋ ಅದು ಗ್ವೀಡೋವಿಗೋಸ್ಕರ, ನಮ್ಮ ಪ್ರೇಮಕ್ಕೋಸ್ಕರ ಹೇಳಿದ್ದು . . . ಈಗ ಎಲ್ಲವನ್ನೂ ಹೇಳುತ್ತೇನೆ . . . ಈ ಮನುಷ್ಯನನ್ನು ಕೊಲ್ಲಲು ಪ್ರಯತ್ನಿ ಸಿದೆ; ಇವನನ್ನು ಗಾಯಪಡಿಸಿದೆ, ನೀವೇ ನೋಡಬಹುದು . . . ಆದರೆ, ಇವನು ನನ್ನ ಕೈಯ ಆಯುಧವನ್ನು ಕಸಿದು ಕಳೆದ . . . ಆಗ ನನಗೆ ಇನ್ನೂ ಗಾಢವಾದ ಪ್ರತೀಕಾರವೊಂದರ ಯೋಚನೆ ಬಂತು, ಇವನ ಕಡೆಗೆ ಒಂದು ನಸುನಗೆಯನ್ನು ಬೀರಿದೆ; ಇವನೂ ಬುದ್ಧಿಕೆಟ್ಟು, ನನ್ನ ಮಂದಹಾಸವನ್ನು ನಂಬಿಕೊಂಡು ಹಿಂದೆ ಬಂದ . . . ಈಗ ಇಲ್ಲಿ ತನ್ನ ಸಮಾಧಿಸ್ಥಾನದಲ್ಲಿದ್ದಾನೆ, ಇದಕ್ಕೆ ನಾನೇ ಸ್ವತಃ ಮುದ್ರೆಯನ್ನು ಅಂಕಿಸುತ್ತೇನೆ . . . ನಾನು ಇವನಿಗೆ ಮುತ್ತು ಕೊಟ್ಟೆ, ಇವನು ನನ್ನ ಮುತ್ತನ್ನು ನಂಬಿದ; ಕುರಿಯ ಹಾಗೆ ನನ್ನ ಹಿಂದೆ ಬಂದ . . . ಈಗ ಇವನು ನನ್ನ ಕೈಯೊಳಗಿದ್ದಾನೆ, ಇದೇ ಕೈಗಳು ಇವನನ್ನು ಹಿಸುಕಿ ಹಿಂಡಿಹಾಕುವುವು! . . .

**ಗ್ವೀಡೊ**: (ಸಮೀಪಿಸುತ್ತ,) ವನ್ನ! . . .

**ವನ್ನ**: ನನ್ನ ಕಡೆ ಚೆನ್ನಾಗಿ ನೋಡು! . . . ಈ ಮನುಷ್ಯನಿಗೆ ಎಷ್ಟು ಹುಚ್ಚೆಂದರೆ, 'ಪ್ರಿನ್ಸಿವಲ್ಲೆ, ನಿನ್ನಲ್ಲಿ ನನಗೆ ಪ್ರೀತಿ!' ಎಂದು ನಾನು ಹೇಳಿದ ಕೂಡಲೆ ನನ್ನನ್ನು ನಂಬಿಬಿಟ್ಟ . . . ಆಃ, ಬೇಕಿದ್ದರೆ ನರಕದ ಗರ್ಭಕ್ಕಾದರೂ

ನನ್ನ ಹಿಂದೆ ಬಂದುಬಿಡುವವನೇ! . . . ಈಗ ಇವನು ನನ್ನವನು, ನನ್ನವನೇ. ದೇವರ ಸಾಕ್ಷಿಯಾಗಿ, ಜಗತ್ತಿನ ಸಾಕ್ಷಿಯಾಗಿ! ಇವನನ್ನು ಗೆದ್ದವಳು ನಾನು, ಇವನನ್ನು ಕೊಂಡವಳು ನಾನು! . . . (ತತ್ತರಿಸುವಳು, ಕಂಬವನ್ನು ಅವಲಂಬಿಸಿ ನಿಲ್ಲುವಳು.) ಸ್ವಲ್ಪ ನೋಡಿಕೊಳ್ಳಿ, ಬೀಳುವ ಹಾಗಾಗುತ್ತದೆ. ಮುಂದೆ ಬರಲಿರುವ ಪ್ರತೀಕಾರವನ್ನು ನೆನೆದು ಈಗ ಆನಂದ ಅತಿಯಾಗುತ್ತಿದೆ! (ಮಾರ್ಕೊವನ್ನು ಕುರಿತು,) ಅಪ್ಪ, ಇವನನ್ನು ನಿನ್ನ ವಶಕ್ಕೆ ಒಪ್ಪಿಸುತ್ತಿದ್ದೇನೆ ನನಗೆ ಇನ್ನೂ ಶಕ್ತಿ ಬರುವ ವರೆಗೆ . . . ನೀನು ಇವನನ್ನು ಒಪ್ಪಿಸಿಕೊ, ಸರಿಯಾದ ಸೆರೆಮನೆಯನ್ನು ಒದಗಿಸು, ಆ ನೆಲಮಾಳಿಗೆಗೆ ಯಾರೂ ಪ್ರವೇಶಿಸದ ಹಾಗಿರಲಿ . . . ಅದರ ಬೀಗದ ಕೈಯನ್ನು ನನಗೆ ಕೊಡು, ಅದನ್ನು ನನಗೇ ಕೊಡಬೇಕು, ಈ ಕೂಡಲೆ. ಯಾರೂ ಇವನನ್ನು ಮುಟ್ಟತಕ್ಕದ್ದಲ್ಲ, ಇವನ ಹತ್ತಿರ ಹೋಗತಕ್ಕದ್ದಲ್ಲ; ಇವನು ನನಗೆ ಸೇರಿದವನು, ನನ್ನವನು, ನನ್ನವನೇ, ನಾನೇ ಇವನನ್ನು ಶಿಕ್ಷಿಸತಕ್ಕದ್ದು . . . ಗ್ವೀಡೊ, ಇವನು ನನಗೆ ಸೇರಿದವನು! (ಮಾರ್ಕೊವಿನ ಕಡೆಗೆ ಹೆಜ್ಜೆಯಿಟ್ಟು.) ಅಪ್ಪ, ಇವನು ನನ್ನವನು, ಇವನ ಹೊಣೆ ನಿನ್ನದು! (ಎಂದು ನೆಟ್ಟದೃಷ್ಟಿಯಿಂದ ಅವನನ್ನು ಕುರಿತು,) ಅರ್ಥವಾಯಿತೆ, ನೀನು ಇವನಿಗೆ ರಕ್ಷಕ. ಇವನಿಗೆ ನೀನು ಹೊಣೆ; ಯಾರೊಬ್ಬರೂ ಇವನ ಕಡೆ ಕೈ ಸುಳಿಸಕೂಡದು, ಮತ್ತೆ ನಾನು ಇವನ ಬಳಿಗೆ ಬರುವಾಗ ಇವನು ಈಗ ಇರುವಂತೆಯೇ, ನಿನ್ನ ಕೈಗೆ ನಾನು ಒಪ್ಪಿಸಿರುವಂತೆಯೇ, ಇರತಕ್ಕದ್ದು. (ಪ್ರಿನ್ಸಿವಲ್ಲೆಯನ್ನು ಕರೆದೊಯ್ಯುವರು.) ಹೋಗಿ ಬಾ, ನನ್ನ ಪ್ರಿನ್ಸಿವಲ್ಲೆ! ಆಃ, ಪುನಃ ಕಂಡೇವು!

[ಪ್ರಿನ್ಸಿವಲ್ಲೆಯನ್ನು ಬಲಪ್ರಯೋಗದಿಂದ ಸೆಳೆದೊಯ್ಯುವ ಸೈನಿಕರ ನಡುವೆ ಗ್ವೀಡೊ ಇರುವುದನ್ನು ಕಂಡು, ವನ್ನ ಕಿರಿಚಿಕೊಂಡು, ತತ್ತರಿಸಿ, ತನಗೆ ಅವಲಂಬನವಾಗಿ ಮುಂದಕ್ಕೆ ನುಗ್ಗಿಬಂದ ಮಾರ್ಕೊವಿನ ತೋಳುಗಳಲ್ಲಿ ಒರಗುವಳು.

**ಮಾರ್ಕೊ** : (ತನ್ನ ತೋಳುಗಳಲ್ಲಿ ಒರಗಿರುವ ವನ್ನಳತ್ತ ಬಾಗಿ, ತಗ್ಗಿದ ಧ್ವನಿಯಿಂದ, ಬೇಗ ಬೇಗ,) ಸರಿ, ವನ್ನ, ಅರ್ಥವಾಯಿತು; ನಿನ್ನ ಸುಳ್ಳು ಅರ್ಥವಾಯಿತು. ಅಸಾಧ್ಯವನ್ನು ನೀನು ಸಾಧಿಸಿಕೊಂಡಿದ್ದೀಯೆ . . . ಇದು ನ್ಯಾಯವೂ ಹೌದು, ತುಂಬ ಅನ್ಯಾಯವೂ ಹೌದು—ಜನರು ಮಾಡುವ

ಪ್ರತಿಯೊಂದರ ಹಾಗೆ . . . ಆದರೂ, ಯಾವುದು ಜೀವ ಕೊಡುತ್ತದೋ ಅದು ನ್ಯಾಯವಾದದ್ದು . . . ಸಂತೈಸಿಕೊ, ವನ್ನ; ನೀನು ಪುನಃ ಸುಳ್ಳಾಡ ಬೇಕಾದೀತು, ಅವನು ನಂಬಲು ನಿರಾಕರಿಸುತ್ತಿದ್ದಾನೆ . . . (ಗ್ವೀಡೊ ವನ್ನು ಕರೆಯುತ್ತ,) ಗ್ವೀಡೊ, ನಿನ್ನನ್ನೆ ಕೇಳುತ್ತಿದ್ದಾಳೆ . . . ಗ್ವೀಡೊ, ಎಚ್ಚರ ಗೊಳ್ಳುತ್ತಿದ್ದಾಳೆ . . .

**ಗ್ವೀಡೊ :** (ತ್ವರೆಯಿಂದ ಬಂದು, ಅವಳನ್ನು ತೋಳುಗಳಲ್ಲಿ ಎತ್ತಿಕೊಂಡು) ನನ್ನ ವನ್ನ! ನೋಡು, ಅದೊ ಮಂದಹಾಸ! . . . ಹೇಳು, ವನ್ನ ! . . . ನಾನು ಎಂದಿಗೂ ಶಂಕೆಪಡಲಿಲ್ಲ . . . ಈಗ ಮುಗಿಯಿತಲ್ಲಾ, ಇನ್ನು ಎಲ್ಲ ಮರೆತುಹೋಗುವುದು—ಈ ನಮ್ಮ ಸೊಗಸಾದ ಪ್ರತೀಕಾರದಲ್ಲಿ ಎಲ್ಲ ಅಳಿಸಿ ಹೋಗುವುದು . . . ಅದೆಲ್ಲಾ ಒಂದು ದುಃಸ್ವಪ್ನದಂತಾಯಿತು . . .

**ವನ್ನ:** (ಕಣ್ಣುಗಳನ್ನು ತೆರೆದು, ನಿಶ್ಶಕ್ತಿಯ ದನಿಯಿಂದ,) ಎಲ್ಲಿ ಅವನು? ಹೌದು, ಹೌದು, ತಿಳಿಯಿತು, ಜ್ಞಾಪಕ ಬಂತು . . . ಬೀಗದ ಕೈ ಎಲ್ಲಿ . . . ಅವನ ಸೆರೆಮನೆಯ ಬೀಗದ ಕೈ; ನಾನು ಹೊರತು ಬೇರೆ ಯಾರೂ . . .

**ಗ್ವೀಡೊ:** ಕಾವಲರು ಹಿಂದಿರುಗಿದ ಒಡನೆ ನಿನಗೆ ಬೀಗದ ಕೈ ಒಪ್ಪಿಸುವರು. ಎಲ್ಲ ನೀನು ಹೇಳಿದ ಹಾಗೆಯೇ . . .

**ವನ್ನ:** ಅದು ನನಗೋಸ್ಕರವಾಗಿಯೇ ನನಗೆ ಬೇಕು. ನನ್ನ ಮನಸ್ಸಿಗೆ ಖಂಡಿತವಾಗುವುದಕ್ಕೋಸ್ಕರ, ಬೇರೆ ಯಾರೊಬ್ಬರೂ...ಹೌದು, ದುಃಸ್ವಪ್ನವೆ ಆಯಿತು . . . ಆದರೆ, ಶುಭಸ್ವಪ್ನ ಆರಂಭವಾಗುವುದು . . . ಶುಭಸ್ವಪ್ನ ಆರಂಭವಾಗುವುದು . . .

ತೆರೆ

# ಟಿಪ್ಪಣಿಗಳು

**ಪ್ಲೇಟೊ** (ಪುಟ ೭): ಗ್ರೀಸ್‌ದೇಶದ ಪ್ರಸಿದ್ಧ ತತ್ತ್ವಜ್ಞಾನಿ. ಕಾಲ. ಕ್ರಿ.ಪೂ. ಸುಮಾರು ೪೨೮. ಈತನು ಕೊಟ್ಟುಹೋಗಿರುವ 'ಸಂವಾದ'ಗಳಿಂದಲೆ ನಮಗೆ ಸೊಕ್ರಟೀಸನ ವಿಚಾರ ಸ್ಪಷ್ಟವಾಗುವುದು.

**ಹೆಸಿಯುಡ್** (ಪುಟ ೮): ಪ್ರಾಚೀನ ಕಾಲದ ಗ್ರೀಸಿನ ಮಹಾಕವಿಗಳಲ್ಲಿ ಒಬ್ಬ. ಹೋಮರ್ ಆದ ತರುವಾಯ ಇವನೇ ಎರಡನೆಯ ಮಹಾ ಕವಿ ಎಂದು ಹೇಳುತ್ತಾರೆ. ಕಾಲ—ಕ್ರಿ.ಪೂ. ಸುಮಾರು ೭೭೬.

**ಹೋಮರ್** (ಪುಟ ೮): ಗ್ರೀಸ್‌ದೇಶದ ಆದಿಕವಿ. ಈತನ ಕಾವ್ಯಗಳು— 'ಇಲಿಯಡ್' ಮತ್ತು 'ಒಡಿಸ್ಸಿ'. ಕಾಲ—ಕ್ರಿ.ಪೂ. ೭೭೬ಕ್ಕೂ ಹಿಂದೆ.

**ಅರಿಸ್ಟಾಟ್‌ಲ್** (ಪುಟ ೮): ಗ್ರೀಸ್‌ದೇಶದ ಪ್ರಸಿದ್ಧ ತತ್ತ್ವಜ್ಞಾನಿ. ಪ್ಲೇಟೋವಿನ ಶಿಷ್ಯ. ಕಾಲ—ಕ್ರಿ.ಪೂ. ಸುಮಾರು ೩೮೪.

# ಪೂರ್ವಕಥೆಗಳು

**೧. ಅಚಿಲೀಸಿನ ಗುಡಾರಕ್ಕೆ ಪ್ರಯಾಮ್ ಹೋದದ್ದು.** (ಪುಟ ೧೦)

ಸ್ಪಾರ್ಟಾದೇಶದ ದೊರೆ—ಮೆನಿಲಾಸ್. ಅವನ ಪತ್ನಿ—ಹೆಲೆನ್. ಲೋಕೋತ್ತರ ರೂಪವತಿಯಾದ ಹೆಲೆನಳನ್ನು ಒಮ್ಮೆ ಪ್ಯಾರಿಸ್ ಎಂಬವನು ಮೋಹಗೊಳಿಸಿ ಅಪಹಾರಮಾಡಿಕೊಂಡು ಹೋದ. (ಈ ಪ್ಯಾರಿಸ್, ಟ್ರಾಯ್ ನಗರದ ದೊರೆಯಾದ ಪ್ರಯಾಮನ ಮಗ.) ಆ ಅಪರಾಧದಿಂದಾಗಿ ಮೆನಿಲಾಸನ ಕಡೆಯವರಿಗೂ ಪ್ಯಾರಿಸಿನ ಕಡೆಯವರಿಗೂ ಹತ್ತಾರು ವರ್ಷ ಘೋರ ಯುದ್ಧ ನಡೆಯಿತು, ಎರಡು ಕಡೆಯೂ ಅನೇಕ ವೀರರು ನಾಶವಾದರು, ಟ್ರಾಯ್ ಧ್ವಂಸವಾಗಿಹೋಯಿತು.

ಈ ಯುದ್ಧದಲ್ಲಿ ಮೆನಿಲಾಸನ ಕಡೆಯ ಅಚಿಲೀಸ್ ಎಂಬ ವೀರನನ್ನೂ ಟ್ರಾಯ್ ನಗರದ ಹೆಕ್ಟರ್ ಎಂಬ ವೀರನನ್ನೂ ಮುಖ್ಯ ವ್ಯಕ್ತಿಗಳನ್ನಾಗಿ ಇರಿಸಿಕೊಂಡು, ಹೋಮರ್ ಕವಿ ತನ್ನ 'ಇಲಿಯಡ್' ಮಹಾಕಾವ್ಯವನ್ನು ಬರೆದಿದ್ದಾನೆ. ಇವರಲ್ಲಿ ಅಚಿಲೀಸ್—ಥೆಸ್ಸಲಿದೇಶದ ರಾಜಕುಮಾರ, ಹೆಕ್ಟರ್—ಪ್ರಯಾಮನ ಕೊನೆಯ ಮಗ.

ಇಲಿಯಡ್ ಕಾವ್ಯದ ಕೊನೆಕೊನೆಗೆ ಅಚಿಲೀಸನಿಂದ ಹೆಕ್ಟರನ ವಧೆಯಾಗುತ್ತದೆ, ವಧೆಯಾದ ಮಗನ ಶವವನ್ನು ಬಿಡಿಸಿಕೊಳ್ಳಲು ತಂದೆಯಾದ ಪ್ರಯಾಮ್ ಅಚಿಲೀಸಿನ ಗುಡಾರಕ್ಕೆ ಹೋಗಿ ಕೃತಕಾರ್ಯನಾಗಿ ಬರುತ್ತಾನೆ.

ಅಚಿಲೀಸ್ ಮಹಾವೀರ. ಯುದ್ಧದಲ್ಲಿ ಅಮೋಘವಾಗಿ ಹೋರಾಡುತ್ತಿದ್ದವನು, ತನಗೂ ತನ್ನ ಅಧಿನಾಯಕನಿಗೂ ಉಂಟಾದ ಮನಸ್ತಾಪದಿಂದಾಗಿ, ಕೈ ನಿಲ್ಲಿಸಿ ತಟಸ್ಥನಾಗಿಬಿಡುತ್ತಾನೆ. ಅದರ ಫಲವಾಗಿ, ಟ್ರಾಯ್ ನಗರದ ವೀರರ ಕೈ ಮೇಲಾಗುತ್ತದೆ. ಹೆಕ್ಟರ್ ಅಪ್ರತಿರಥನಾಗಿ ಶತ್ರುಗಳನ್ನು ಧ್ವಂಸ ಮಾಡತೊಡಗುತ್ತಾನೆ. ಆ ಸಂದರ್ಭದಲ್ಲಿ, ಅಚಿಲೀಸನ ಆಪ್ತಮಿತ್ರನಾದ ಪತ್ರೊಕ್ಲಸ್ ಹೆಕ್ಟರಿಂದ ಹತನಾಗುತ್ತಾನೆ. ಆಗ, ಮಿತ್ರನ ಮರಣವಾರ್ತೆಯಿಂದ ಉದ್ವಿಗ್ನನಾಗಿ, ಅಚಿಲೀಸ್ ತನ್ನ ತಟಸ್ಥಭಾವವನ್ನು ತೆಗೆದೊಗೆದು, ರಣರಂಗಕ್ಕೆ ನುಗ್ಗುತ್ತಾನೆ. ಹೆಕ್ಟರನ್ನು ತಗುಳಿಹೋಗಿ, ಅವನೊಡನೆ ಹೋರಾಡಿ, ಅವನನ್ನು ಕೊಲ್ಲುತ್ತಾನೆ. ಅವನ ರೋಷ ಅಷ್ಟಕ್ಕೆ ನಿಲ್ಲದು.

ಸತ್ತು ಅಚೇತನವಾಗಿ ಮೃಣ್ಮಾತ್ರವಾದ ಆ ಶವವನ್ನು ತನ್ನ ರಥಕ್ಕೆ ಕಟ್ಟಿ, ಪಾಳೆಯದಲ್ಲೆಲ್ಲ ಎಳೆದು, ಅದಕ್ಕೆ ಅವಮಾನ ಮಾಡುತ್ತಾನೆ. ಆ ಶವಕ್ಕೆ ಸಂಸ್ಕಾರವಾಗದಂತೆ ತಡೆಯುತ್ತಾನೆ.

ರೋಷದಿಂದ ಅವನು ಮಾಡಿದ ಅಕಾರ್ಯವನ್ನು ಕಂಡು, ಇಲ್ಲಿ ಪ್ರಯಾಮನಿಗೆ ಕಡುದುಃಖ, ಅಲ್ಲಿ ದೇವದೇವನಾದ ಸ್ಯೂಸ್ ದೇವತೆಗೆ ತುಂಬ ಅಸಮಾಧಾನ. 'ಸತ್ತ ವೀರನ ಶವಕ್ಕೆ ಹೀಗೆ ಅವಮಾನಮಾಡುವುದು ತಗದು. ಪ್ರಯಾಮನು ಏನಾದರೂ ತಕ್ಕ ಪರಿಹಾರ ಕೊಟ್ಟು ಆ ಶವವನ್ನು ಬಿಡಿಸಿಕೊಳ್ಳಲಿ' ಎಂದು ದೇವದೇವನು ಆಜ್ಞೆಮಾಡುವನು. ಆತನ ಆಜ್ಞೆಯನ್ನು ಅಚಿಲೀಸನಿಗೆ ಅವನ ತಾಯಿಯಾದ ಥೀಟಿಸ್ ದೇವತೆ ಬಂದು ಹೇಳುವಳು; ಅಚಿಲೀಸ್ ಸ್ಯೂಸ್ ದೇವತೆಯ ಆಜ್ಞೆಗೆ ಒಪ್ಪುವನು. ಅದೇ ಆಜ್ಞೆಯನ್ನು ಐರೀಸ್ ಎಂಬ ದೇವತೆ ತಂದು ಪ್ರಯಾಮನಿಗೆ ತಿಳಿಸುವಳು. ಅದರಂತೆ ಪ್ರಯಾಮ್ ಏಕಾಕಿಯಾಗಿ, ಜೊತೆಗೆ ಒಬ್ಬ ಸಾರಥಿಯನ್ನು ಮಾತ್ರ ಕರೆದುಕೊಂಡು, ಪರಿಹಾರವಾಗಿ ಒಪ್ಪಿಸಬೇಕಾದ ವಸ್ತ್ರವಿಭೂಷಣ ರತ್ನ ಕನಕಗಳನ್ನು ತೆಗೆದುಕೊಂಡು ಅಚಿಲೀಸಿನ ಗುಡಾರಕ್ಕೆ ಹೋಗುವನು.

ಅಚಿಲೀಸಿನ ಮಹಾರೋಷದ ಕತೆಗಳನ್ನು ಕೇಳಿ ಹೆದರಿಹೋಗಿದ್ದ ಮುದುಕ ಪ್ರಯಾಮನನ್ನು ದೇವದೂತನಾದ ಹರ್ಮಿಸ್ ತಾನೆ ಕರೆದುಕೊಂಡು ಹೋಗುತ್ತಾನೆ, ಸೂಕ್ತವಾದ ಧೈರ್ಯಗಳನ್ನು ಹೇಳಿ. ಅಚಿಲೀಸ್ ಎಂಥವನೊ, ಮಗನ ಮೇಲಿನ ಪ್ರತೀಕಾರಬುದ್ಧಿಯಿಂದ ಏನು ಮಾಡುವನೊ, ಎಂದು ಅಂಜಿಕೊಂಡೇ ಪ್ರಯಾಮ್ ಹೋಗಿ ಅಂಗಲಾಚಿ ಬೇಡಿದರೆ—ಮಹಾವೀರನಾದ ಅಚಿಲೀಸ್ ಆ ನರೆತ ಕೂದಲಿನ ಮುದಿ ಮಹಾರಾಜನ ಪುತ್ರಶೋಕವನ್ನು ಕಂಡು ಕರಗಿ, ಅವನನ್ನು ಸೌಜನ್ಯದಿಂದ ಸ್ವಾಗತಿಸುತ್ತಾನೆ, ಅವನ ದುಃಖ ಅವನ ಭೀತಿ ಆರುವಂತೆ ಮಾತನಾಡುತ್ತಾನೆ, ಸ್ಯೂಸ್ ದೇವತೆಯ ಆಜ್ಞಾನುಸಾರವಾಗಿ ಹೆಕ್ಟರನ ಶವವನ್ನು ತಾನು ಬಿಟ್ಟುಕೊಡುವುದಾಗಿ ವಾಗ್ದಾನಮಾಡುತ್ತಾನೆ. ಅವನಿಗೆ ಕುಳ್ಳಿರಲು ಆಸನ ಕೊಟ್ಟು, ಅವನ ಹಸಿವು ಬಾಯಾರಿಕೆಗಳನ್ನು ಶಮನಮಾಡಿ, ರಾತ್ರಿ ಮಲಗುವುದಕ್ಕೆ ಹಾಸಿಗೆಗಳನ್ನು ಒದಗಿಸುತ್ತಾನೆ. ಬೆಳಗಿನ ಜಾವದಲ್ಲಿ ಹೆಕ್ಟರನ ಶವವನ್ನು ಸುಗಂಧಜಲದಿಂದ ತೊಳೆಯಿಸಿ, ಪ್ರಯಾಮ್ ತನಗೆ ತಂದೊಪ್ಪಿಸಿದ ಅಮೂಲ್ಯವಾದ ವಸ್ತ್ರದಿಂದಲೇ ಆ

ದೇಹಕ್ಕೆ ವೇಷ್ಟನಮಾಡಿ, ಅದನ್ನು ತಾನೇ ಪ್ರಯಾಮನ ರಥದಲ್ಲಿರಿಸಿ, ಆ ತಂದೆಯನ್ನು ಸುರಕ್ಷಿತವಾಗಿ ಟ್ರಾಯ್ ನಗರಕ್ಕೆ ಬೀಳ್ಕೊಡುತ್ತಾನೆ. ಅಷ್ಟೇ ಅಲ್ಲದೆ, 'ಹೆಕ್ಟರನ ಶವಕ್ಕೆ ಆಗಬೇಕಾದ ಸಂಸ್ಕಾರಗಳು ತೀರುವವರೆಗೂ, ಎಂದರೆ ಹನ್ನೆರಡು ದಿವಸಗಳ ಕಾಲ, ನನ್ನವರು ಯುದ್ಧಮಾಡದಂತೆ ತಡೆದಿರಿಸುತ್ತೇನೆ. ನೀವು ನಿರ್ಭೀತಿಯಿಂದ ಕರ್ಮಾಂತರಗಳನ್ನು ನಡಸಬಹುದು' ಎಂದು ಭರವಸೆಕೊಟ್ಟು, ಅದರಂತೆಯೇ ಅನುಕೂಲಮಾಡಿಕೊಡುತ್ತಾನೆ.

ಈ ಕತೆ, ಪ್ರಯಾಮ್ ಅಚಿಲೀಸನ ಗುಡಾರಕ್ಕೆ ಹೋಗಿಬಂದದ್ದು, 'ಇಲಿಯಡ್' ಕಾವ್ಯದ ಇಪ್ಪತ್ತನಾಲ್ಕನೆಯ ಅಧ್ಯಾಯದ ವಸ್ತು.

## ೨. ಜೂಡಿತ್ ಮತ್ತು ಹಾಲೊಫರ್ನೆಸ್ (ಪುಟ ೭೪ ಮುಂದೆ)

ಅಸ್ಸೀರಿಯಾ ದೇಶದ ದೊರೆ ನಬುಷೊಡೊನೊಸೊರ್. ಅವನ ಪ್ರಧಾನ ಸೇನಾಪತಿ ಹಾಲೊಫರ್ನೆಸ್.

ಒಂದು ಸಲ ದೊರೆಯ ಆಜ್ಞೆಯ ಪ್ರಕಾರ ಸೇನಾಪತಿ ದಿಗ್ವಿಜಯಕ್ಕೆ ಹೊರಟ. ಸಮಸ್ತ ಸೇನಾಪರಿವಾರದೊಡನೆ ನಡೆದು, ಪಶ್ಚಿಮ ದಿಕ್ಕಿನಲ್ಲಿದ್ದ ಪ್ರಾಂತಗಳನ್ನೆಲ್ಲ ಕ್ರಮಕ್ರಮವಾಗಿ ಗೆದ್ದು, ಯೂದಾಯಕ್ಕೆ ಬಂದ. ಅಲ್ಲಿನವರು ದೈವಭಕ್ತರು, ಈ ದಳಪತಿಗೆ ಶರಣಾಗತರಾಗಲು ಸಮ್ಮತಿಸದೆ, ಅವನು ಬರುವ ಸುದ್ದಿಯನ್ನು ಕೇಳಿಯೇ ತಮ್ಮ ದೇವರುಗಳನ್ನೂ ಬಲಿಪೀಠಗಳನ್ನೂ ಎತ್ತಿಕೊಂಡು ಬೆಟ್ಟದ ಶಿಖರಗಳಿಗೆ ಓಡಿಹೋಗಿ, ಅಲ್ಲಿನ ದುರ್ಗಗಳನ್ನು ಭದ್ರಪಡಿಸತೊಡಗಿದರು. ಅವರ ಪ್ರತಿಭಟನೆಯನ್ನು ಕಂಡು ಹಾಲೊಫರ್ನೆಸಿಗೆ ಕ್ರೋಧ ಬಂತು. ಆಗ ಸುತ್ತಿನವರು ಹೇಳಿದರು: "ಇದಕ್ಕಾಗಿ ಏನೂ ಚಿಂತೆ ಬೇಡ. ಅವರು ನೀರಿಗಾಗಿ ಬೆಟ್ಟದ ಬುಡದ ಚಿಲುಮೆಗೇ ಬರಬೇಕು. ನೀರು ಅವರಿಗೆ ದೊರಕದಂತೆ ನಾಲ್ಕು ದಿಕ್ಕುಗಳಲ್ಲೂ ಸೈನ್ಯವನ್ನು ಇರಿಸಿದರೆ, ನೀರು ಮುಗಿದ ಮೇಲೆ ಅವರಾಗಿಯೇ ಶರಣಾಗತರಾಗುತ್ತಾರೆ." ಹಾಲೊಫರ್ನೆಸಿಗೆ ಆ ಮಾತು ರುಚಿಸಿತು. ಅದರಂತೆ ಸೇನೆ ನೀರಿನ ಕಾವಲಿಗೆ ನಿಂತಿತು.

ಬೆಟ್ಟದ ಮೇಲಿನವರು ಅದನ್ನು ಕಂಡು ಎದೆ ಕುಂದಿದರು. ಹೀಗೆ ನೀರಿಲ್ಲದೆ ಇಲ್ಲಿ ಸಾಯುವುದಕ್ಕಿಂತ, ಇವರಿಗೆ ಶರಣಾಗಿಬಿಡೋಣ ಎಂದರು. ಆಗ ನಗರದ ಹಿರಿಯರು "ಇನ್ನೊಂದು ಐದು ದಿನ ತಾಳಿ. ಅಷ್ಟರಲ್ಲಿ ದೇವರ

ದಯೆಯಿಂದ ಮಳೆ ಬಂತೇ, ಸರಿ; ಇಲ್ಲದಿದ್ದರೆ, ವಶರಾಗುವುದು ತಿಳಿದೇ ಇದೆ" ಎಂದು ಅವರನ್ನು ತಡೆದರು. ದೇವರಿಗೆ ಮಳೆಗಾಗಿ ಮೊರೆಯಿಟ್ಟರು.

ಹೀಗೆ, ಇನ್ನು ಐದು ದಿವಸಗಳಲ್ಲಿ ಮಳೆ ಬರದಿದ್ದರೆ, ಇವರು ಹಾಲೊಫರ್ನೆಸಿಗೆ ನಗರವನ್ನು ಒಪ್ಪಿಸಿಬಿಡುತ್ತಾರೆ, ಎಂಬುದು ಜೂಡಿತ್ತಿಗೆ ತಿಳಿಯಿತು. ಅವಳು ಅದೇ ನಗರದವಳು, ವಿಧವೆ. ಪತಿಯನ್ನು ಕಳೆದುಕೊಂಡು ಮೂರು ವರ್ಷದಮೇಲೆ ನಾಲ್ಕುಮಾಸವಾಗಿದ್ದರೂ ಇನ್ನೂ ವ್ಯಸನದ ವಸ್ತ್ರಗಳಲ್ಲೆ ಇದ್ದು ವ್ರತೋಪವಾಸ ನಡಸುತ್ತಿದ್ದಳು. ಗಂಡ ಬಿಟ್ಟುಹೋದ ಆಸ್ತಿ ಅಪಾರವಾಗಿದ್ದರೂ ಸುಖದ ಜೀವನದಲ್ಲಿ ಮಗ್ನಳಾಗದೆ, ದೈವಭೀರುವಾಗಿದ್ದಳು.

ನಗರದ ಪ್ರಮುಖರನ್ನು ಕರೆದು ಅವಳು ಹೇಳಿದಳು: "ದೇವರು ಐದು ದಿವಸದಲ್ಲಿ ಮಳೆ ಕೊಡದಿದ್ದರೆ, ನಗರವನ್ನು ಶತ್ರುಗಳಿಗೆ ಒಪ್ಪಿಸಿಬಿಡುತ್ತೇವೆ, ಎಂದು ಏಕೆ ಹೇಳುತ್ತೀರಿ? ಅಂಥ ಮಾತನಾಡಿ ದೇವರನ್ನು ಕೆಣಕಬೇಡಿ. ಯಾವಾಗ ರಕ್ಷಿಸಬೇಕೊ, ಯಾರಿಂದ ರಕ್ಷಿಸಬೇಕೊ, ಅದು ಆತನಿಗೆ ಗೊತ್ತು. ಸದ್ಯದ ಸಂಕಟದಿಂದ ಪಾರಾಗುವ ದಾರಿ ತೋರಿಸುವಂತೆ ಆತನಿಗೆ ಮೊರೆಯಿಡಿ. ನಗರವನ್ನು ಒಪ್ಪಿಸುವ ಮಾತು ಬಿಡಿ." ಎಂದು ಅವರನ್ನು ಒಪ್ಪಿಸಿದ ಮೇಲೆ ಜೂಡಿತ್ ಹೇಳಿದಳು: "ನಾನೊಂದು ಕೆಲಸ ಮಾಡುತ್ತೇನೆ. ಈ ರಾತ್ರೆ ನಾನು ನನ್ನ ದಾಸಿಯೊಡನೆ ನಗರದಿಂದ ಹೊರಡುತ್ತೇನೆ. ನೀವು ಹೇಳಿದ ಐದು ದಿನಗಳೊಳಗಾಗಿ ದೇವರು ನನ್ನ ಕೈಯಿಂದ ಶತ್ರುಗಳನ್ನು ಸಂಹಾರಮಾಡಿಸುತ್ತಾನೆ. ನಾನು ಮಾಡುವ ಕೆಲಸ ಏನೆಂದು ಈಗ ಕೇಳಬೇಡಿ. ಕೆಲಸ ಮುಗಿದ ಮೇಲೆ ನಿಮಗೇ ತಿಳಿಯುತ್ತದೆ."

ಆ ರಾತ್ರೆ ದೇವರಿಗೆ ಧೂಪವೊಪ್ಪಿಸುವ ಹೊತ್ತಿನಲ್ಲಿ ಜೂಡಿತ್ ಪ್ರಾರ್ಥಿಸಿದಳು: "ಓ ದೇವರೆ, ಈ ವಿಧವೆಯ ಮಾತಿಗೆ ಕಿವಿ ಕೊಡು. ಅಸ್ಸೀರಿಯಾದವರು ಹೀಗೆ ನಮ್ಮ ಧರ್ಮವನ್ನು ನಾಶಮಾಡಲು ಬಂದಿದ್ದಾರೆ. ಅವರನ್ನು ಸಂಹಾರಮಾಡಲು ಬೇಕಾದ ಶಕ್ತಿಯನ್ನು ಈ ಹೆಂಗಸಿಗೆ ದಯಪಾಲಿಸು."

ಅದೇ ರಾತ್ರೆ ಜೂಡಿತ್ ತನ್ನ ವ್ಯಸನದ ವಸ್ತ್ರವೇಷಗಳನ್ನು ತೆಗೆದು ಹಾಕಿ, ಸಂತೋಷದ ಉಡುಪುಗಳನ್ನೂ ಆಭರಣಗಳನ್ನೂ ಧರಿಸಿದಳು. ಕೈಗೆ ಬಳೆ, ಕೊರಳಿಗೆ ಸರ, ಕಿವಿಗೆ ಓಲೆ, ಬೆರಳಿಗೆ ಉಂಗುರ, ಕಾಲಿಗೆ ರಕ್ಷೆ; ಕಂಡವರ ಕಣ್ಣು ಸೆಳೆಯುವಂತೆ ಸಿಂಗಾರವಾದಳು. ಹುರಿದ ಕಾಳು, ಒಣಗಿದ ಅಂಜೂರ,

ಸೊಗಸಾದ ರೊಟ್ಟಿಗಳನ್ನು ಬುತ್ತಿ ಕಟ್ಟಿಕೊಂಡು, ದಾಸಿಯೊಡನೆ ನಗರದಿಂದ ಹೊರಟಳು. ಬೆಟ್ಟ ಇಳಿದು, ಕಣಿವೆಯಲ್ಲಿ ಅಸ್ಸೀರಿಯದ ಸೇನೆಯಿದ್ದಲ್ಲಿಗೆ ಬಂದಳು. "ನಾನು ಇಬ್ರೀಯರ ಹೆಂಗಸು. ಬೆಟ್ಟದ ಮೇಲಿನ ದುರ್ಗದಿಂದ ಕದ್ದು ಬಂದಿದ್ದೇನೆ. ಹಾಲೊಫರ್ನೆಸಿನ ಬಳಿಗೆ ನನ್ನನ್ನು ಕರೆದೊಯ್ಯಿರಿ. ದುರ್ಗವನ್ನು ಸಾಧಿಸುವ ದಾರಿ ತೋರಿಸಿಕೊಡುತ್ತೇನೆ." ಎಂದಳು.

ಅವಳ ಮಾತನ್ನು ಕೇಳಿ, ಅವಳ ರೂಪವನ್ನು ಕಂಡು, ಎಲ್ಲರೂ ಆಶ್ಚರ್ಯಪಟ್ಟರು. ಅವಳನ್ನು ಹಾಲೊಫರ್ನೆಸಿನ ಬಳಿಗೆ ಕರೆದೊಯ್ದರು. ಹಾಲೊಫರ್ನೆಸ್ ಕೂಡ ಅವಳ ರೂಪಿಗೆ ವಶನಾದ, ಅವಳ ಮಾತಿಗೆ ಮರುಳಾದ.

ಜೂಡಿತ್ ಹೇಳಿದಳು : "ನಿನ್ನ, ನಿನ್ನ ಅರಸನ, ರಾಜ್ಯನೀತಿಯನ್ನು ಕೇಳಿಬಲ್ಲೆನಾದರು ಈ ನನ್ನ ಜನವನ್ನು ಸೋಲಿಸುವುದು ನಿಮಗೆ ಸಾಧ್ಯವಿಲ್ಲ. ಆದರೆ ಈಗ ದುರ್ಗದಲ್ಲಿ ಆಹಾರವೂ ನೀರೂ ಕೊರೆಬಿದ್ದಿರುವುದರಿಂದ ಅವರು ಹಸುಗಳನ್ನು ವಧಿಸಬೇಕೆಂದಿದ್ದಾರೆ, ದೇವದಾಯವಾಗಿರುವ ಧಾನ್ಯಗಳನ್ನು ತಾವು ತಿನ್ನಬೇಕೆಂದಿದ್ದಾರೆ. ಇದು ದೈವದ್ರೋಹ. ಇದಕ್ಕೆ ಅಪ್ಪಣೆ ಪಡೆಯಬೇಕೆಂದು ಜೆರೂಸಲೆಮ್ಮಿಗೆ ಜನ ಹೋಗಿದ್ದಾರೆ. ಅವರು ಅಪ್ಪಣೆ ಪಡೆದು ಬಂದ ಕೂಡಲೆ, ಈ ದೈವದ್ರೋಹ ಆಗುತ್ತದೆ. ಅದು ಆದ ಒಡನೆ ನಿಮ್ಮ ಕೈಯಲ್ಲಿ ಅವರ ಪತನ ಸುಲಭವಾಗಿ ಆಗುತ್ತದೆ. ದೈವಭೀರುವಾದ ನನಗೆ ಅವರ ನಡತೆ ಸರಿಬೀಳದ್ದರಿಂದ ನಾನು ಅಲ್ಲಿಂದ ಕದ್ದು ಬಂದೆ."

ಹಾಲೊಫರ್ನೆಸ್ ಅವಳ ರೂಪಕ್ಕೆ ಮೆಚ್ಚಿಕೊಂಡ, ಅವಳ ಬುದ್ಧಿಗೆ ಮೆಚ್ಚಿಕೊಂಡ, ಅವಳನ್ನು ತನ್ನ ರಾಯಗುಡಾರದಲ್ಲಿಯೆ ನಿಲ್ಲಿಸಿಕೊಂಡ.

ಜೂಡಿತ್ ಮೂರು ದಿನ ಅಲ್ಲೆ ಇದ್ದಳು. ತಾನು ಬುತ್ತಿಕಟ್ಟಿ ತಂದಿದ್ದುದನ್ನು ತಿನ್ನುವಳು, ಕುಡಿಯುವಳು. ನಡುರಾತ್ರಿಯಲ್ಲಿ ಬೆಟ್ಟದ ಬುಡದ ಚಿಲುಮೆಗೆ ಹೋಗಿ, ಸ್ನಾನಮಾಡಿ, "ಶಕ್ತಿ ಕೊಡು, ದೇವರೆ" ಎಂದು ಬೇಡುವಳು.

ನಾಲ್ಕನೆಯ ದಿನ ರಾತ್ರಿ ಹಾಲೊಫರ್ನೆಸ್ ತನ್ನ ಸೇವಕರಿಗೆ ಮಾತ್ರ ಒಂದು ಸಂತೋಷಕೂಟವನ್ನು ಏರ್ಪಡಿಸಿದ, ದಳಪತಿಗಳನ್ನು ಕರೆಯಲಿಲ್ಲ. "ನಾಲ್ಕು ದಿವಸವಾದರೂ ನನ್ನಂಥ ವೀರನು ಇಂಥ ಸುಂದರಿಯನ್ನು ಮುಟ್ಟದೆ ಬಿಟ್ಟನೆಂದರೆ, ನಗೆಗೀಡು ಅಲ್ಲವೆ?" ಎಂದು ಜೂಡಿತ್‌ಅನ್ನು ಕರೆಸಿಕೊಂಡ.

ಜೂಡಿತ್ ಸರ್ವಾಲಂಕಾರಭೂಷಿತೆಯಾಗಿ ಬಂದಳು. ಹಾಲೊಫರ್ನೆಸಿನ ಹೃದಯ ದ್ರವವಾಯಿತು, ಮನಸ್ಸು ಚಂಚಲವಾಯಿತು, ಕಾತರ ಅತಿಯಾಯಿತು. ಜೂಡಿತ್ತಿಗೆ ಮಧುಪಾತ್ರೆಯನ್ನು ಎತ್ತಿ ನೀಡಿದ. ಜೂಡಿತ್ ಮಧುವನ್ನು ಮತ್ತೆ ಮತ್ತೆ ತುಂಬಿ ಹಾಲೊಫರ್ನೆಸಿಗೆ ಕುಡಿಸಿದಳು. ತಾನು ಮಾತ್ರ, ತನ್ನ ದಾಸಿ ಸಿದ್ಧಪಡಿಸಿದ್ದ ಆಹಾರವನ್ನು ತಿಂದಳು, ಮಧುವನ್ನು ಸವಿದಳು.

ಸ್ವಲ್ಪ ವೇಳೆಯಲ್ಲೆ ಸೇವಕರೆಲ್ಲ ಎದ್ದು ನಿದ್ದೆಮಾಡಲು ಹೊರಟರು. ಗುಡಾರದಲ್ಲಿ ಜೂಡಿತ್, ಹಾಲೊಫರ್ನೆಸ್ ಇಬ್ಬರೇ. ದಿನವೂ ಗುಡಾರದ ಬಾಗಿಲು ಕಾಯುವವನ ಬದಲಾಗಿ ಈ ದಿನ ಜೂಡಿತ್ತಿನ ದಾಸಿ ಕಾವಲಿದ್ದಾಳೆ. ಹಾಲೊಫರ್ನೆಸ್ ಮಧುಪಾನದಿಂದ ಮೈಮರೆತು ಹಾಸಿಗೆಯ ಮೇಲೆ ಬಿದ್ದಿದ್ದಾನೆ.

ಜೂಡಿತ್ ಎದ್ದು ನಿಂತಳು. "ದೇವರೆ, ನನ್ನ ಕೈಗೆ ಬಲ ಕೊಡು" ಎಂದು ಬೇಡಿದಳು. ಗುಡಾರದಲ್ಲಿ ತೂಗುಹಾಕಿದ್ದ ಚಂದ್ರಾಯುಧವೊಂದನ್ನು ಬಲಗೈಯಲ್ಲಿ ಎತ್ತಿ, ಎಡಗೆಯ್ಯಿಂದ ಹಾಲೊಫರ್ನೆಸಿನ ತಲೆಗೂದಲನ್ನು ಹಿಡಿದು, ಎರಡು ಸಲ ಬೀಸಿದಳು. ರುಂಡ ಕೈಗೆ ಬಂತು, ಮುಂಡ ಕೆಳಗೆ ಉರುಳಿತು. ಜೂಡಿತ್ ಆ ತಲೆಯನ್ನು ತನ್ನ ಬುತ್ತಿಯ ಚೀಲದಲ್ಲಿರಿಸಿ ದಾಸಿಯ ಕೈಗೆ ಕೊಟ್ಟಳು.

ಡೇರೆಯಿಂದ ಹೊರಟು ಅವರಿಬ್ಬರೂ ಬೆಟ್ಟದ ಕಡೆಗೆ ನಡೆದಾಗ, ಎಂದಿನಂತೆ ಸ್ನಾನಕ್ಕೆ ಹೋಗುತ್ತಿದ್ದಾರೆ ಎಂದು ಸೈನಿಕರೆಂದುಕೊಂಡರು.

ಬೆಟ್ಟದ ಮೇಲಿನ ದುರ್ಗದ ಬಾಗಿಲಿನವರು ಜುಡಿತ್ತಿಗೆ ಬಾಗಿಲು ತೆರೆದರು. ಜೂಡಿತ್ತಿನ ಹೆಸರು ಕೇಳಿ ಆಬಾಲವೃದ್ಧರು ಓಡೋಡಿ ಬಂದರು.

ಜೂಡಿತ್ ಹೇಳಿದಳು: "ಇದೋ, ಹಾಲೊಫರ್ನೆಸಿನ ರುಂಡ. ದೇವರು ನನ್ನ ಮೂಲಕ ಅವನ ಸಂಹಾರ ಮಾಡಿಸಿದ್ದಾನೆ. ದೇವರ ದಯೆ ನಮ್ಮನ್ನು ತೊರೆಯಲಿಲ್ಲ. ದೇವರು ನನ್ನನ್ನು ಸಂರಕ್ಷಿಸಿದ. ನನ್ನ ರೂಪವು ಅವನನ್ನು ಮರುಳುಗೊಳಿಸಿ ಮರಣಕ್ಕೆ ಒಯ್ದಿತಾದರೂ ಅವನು ನನ್ನಲ್ಲಿ ಪಾಪವಾಚರಿಸಲಿಲ್ಲ. ಅವನಿಂದ ನನಗೆ ಯಾವ ಹಾನಿಯೂ ಆಗಲಿಲ್ಲ."

ಜನರೆಲ್ಲ ಆಶ್ಚರ್ಯಪಟ್ಟರು, ದೇವರ ಕರುಣೆಗೆ ಕಣ್ದೆರೆದರು. ನಗರದ ಪ್ರಮುಖರು ಹೇಳಿದರು: "ಮಗಳೆ, ನೀನೆ ಧನ್ಯೆ. ಸರ್ವಶಕ್ತನಾದ ದೇವರು ನಿನ್ನಿಂದ ನಮ್ಮ ಶತ್ರುವನ್ನು ಸಂಹಾರಮಾಡಿಸಿದ. ನಿನ್ನ ದೈವಭಕ್ತಿಯನ್ನು

ಯಾರೂ ಎಂದಿಗೂ ಮರೆಯಲಾರರು. ದೇಶದ ಹಿತರಕ್ಷಣೆಗೋಸ್ಕರ ನೀನು ನಿನ್ನ ಜೀವವನ್ನು ಮುಡಿಪುಮಾಡಿ, ನಿನ್ನ ಸತೀತ್ವವನ್ನು ಉಳಿಸಿಕೊಂಡು, ನಮ್ಮನ್ನು ಕಾಪಾಡಿದ ಕಾರಣ, ನಿನ್ನ ಹೆಸರು ಸರ್ವಕಾಲಕ್ಕೂ ಕೀರ್ತಿತವಾಗುವುದು." ಅದಕ್ಕೆ ನಗರದ ಜನ ಹೇಳಿದರು : "ತಥಾಸ್ತು, ತಥಾಸ್ತು."

ಜೂಡಿತ್ ಹಾಲೊಫರ್ನೆಸ್ಸನ್ನು ಕೊಂದ ಈ ಕತೆ ಯೆಹೂದ್ಯರ ಧರ್ಮಗ್ರಂಥಗಳಲ್ಲಿ ನಿರೂಪಿತವಾಗಿದೆ.

### ೩. ಲ್ಯೂಕ್ರೆಸಿಯ ಶೀಲಭಂಗ (ಪುಟ ೭೪ರಿಂದ ಮುಂದೆ.)

ಲೂಸಿಯಸ್ ಟಾರ್ಕ್ವಿನಿಯಸ್ ಎಂಬವನು ತನ್ನ ಸ್ವಂತ ಮಾವನನ್ನೆ ಕೊಲೆಮಾಡಿಸಿ, ರಾಜ್ಯಪದ್ಧತಿಗೆ ವಿರುದ್ಧವಾಗಿ ತಾನೆ ರೋಮಿಗೆ ರಾಜನಾದ. ಅವನು ಒಂದು ಸಲ ಆರ್ಡಿಯಾ ಪ್ರಾಂತದ ಮೇಲೆ ಮುತ್ತಿಗೆ ಹೋಗಿದ್ದಾಗ, ಸೇನೆಯ ನಾಯಕರು ಕೆಲವರು ರಾಜಕುಮಾರನಾದ ಸೆಕ್ಸ್ಟಸ್ ಟಾರ್ಕ್ವಿನಿಯಸನ ಗುಡಾರದಲ್ಲಿ ಕುಳಿತು ಮಾತನಾಡುತ್ತಿದ್ದರು. ಆಗ ಏನೋ ಮಾತು ಬಂದು, ಎಲ್ಲರೂ ತಮ್ಮ ತಮ್ಮ ಪತ್ನಿಯರ ಗುಣಗಳನ್ನು ಕೊಂಡಾಡತೊಡಗಿದರು. ಅವರಲ್ಲಿ ಒಬ್ಬನಾದ ಕೊಲ್ಲಾಟಿನಸ್ ತನ್ನ ಪತ್ನಿಯಾದ ಲ್ಯೂಕ್ರೆಸಿಯ ಅಸಾಧಾರಣವಾದ ಸತೀತ್ವವನ್ನು ಕೀರ್ತನೆ ಮಾಡಿದ. ಅದೇ ವಿನೋದದ ಮಾತಿನಲ್ಲಿಯೇ, ತಾವು ಅನಿರೀಕ್ಷಿತವಾಗಿ ತಮ್ಮತಮ್ಮ ಮನೆಗಳಿಗೆ ಹೋಗಿ, ತಮ್ಮ ಪತ್ನಿಯರು ತಮ್ಮ ಪರೋಕ್ಷವಲ್ಲಿ ಏನು ಮಾಡುತ್ತಿರುವರೋ ನೋಡಿ ಬರಬೇಕೆಂದು ಎಲ್ಲರೂ ಆ ಕೂಡಲೆ ರೋಂ ನಗರಕ್ಕೆ ಹೋದರು. ಹೋದರೆ, ಲ್ಯೂಕ್ರೆಸಿ ಒಬ್ಬಳು ಮಾತ್ರ—ರಾತ್ರೆ ಅಷ್ಟು ಅವೇಳೆಯಾದರೂ ರಾಟೆಯ ಮುಂದೆ ಕುಳಿತು ನೂಲುತ್ತಿದ್ದಾಳೆ; ಉಳಿದವರ ಹೆಂಡಿರು ಸಂತೋಷದಿಂದ ನರ್ತನ ಗಾಯನಗಳಲ್ಲಿ ಮಗ್ನರಾಗಿದ್ದಾರೆ. ಆಗ ಎಲ್ಲರೂ ಲ್ಯೂಕ್ರೆಸಿಯನ್ನು ಕೀರ್ತಿಸಿ, ಕೊಲ್ಲಾಟಿನಸ್‌ಅನ್ನು ಪ್ರಶಂಸಿಸಿದರು.

ಆ ಸಮಯದಲ್ಲಿ ಸೆಕ್ಸ್ಟಸ್ ಟಾರ್ಕ್ವಿನಿಯಸ್ ಲ್ಯೂಕ್ರೆಸಿಯ ಸೌಂದರ್ಯವನ್ನು ಕಂಡು ಕಾಮಗೊಂಡನಾದರೂ, ಆಗ ಏನೂ ತೋರಗೊಡದೆ, ಮಿಕ್ಕವರೊಡನೆ ಪಾಳಯಕ್ಕೆ ಹಿಂದಿರುಗಿದನು. ಸ್ವಲ್ಪ ಹೊತ್ತಾದ ಮೇಲೆ, ಅಲ್ಲಿಂದ ರಹಸ್ಯವಾಗಿ ಹೊರಟು, ಲ್ಯೂಕ್ರೆಸಿಯ ಭವನಕ್ಕೆ ಬಂದನು. ಲ್ಯೂಕ್ರೆಸಿ,

ಬಂದವನು ದೊರೆಯ ಮಗನೆಂಬ ಗೌರವದಿಂದ, ಅಂಥ ಮಾನ್ಯನಾದ ಅತಿಥಿಗೆ ಹೇಗೆ ಉಪಚಾರ ಮಾಡಬೇಕೋ ಹಾಗೆ ಉಪಚರಿಸಿ, ಅವನಿಗೆ ಅಲ್ಲೆ ಆ ರಾತ್ರಿಗೆ ಬೀಡು ಮಾಡಿಕೊಟ್ಟಳು.

ಆದರೆ ಅದೇ ರಾತ್ರಿ ಅವನು ಕಳ್ಳತನದಿಂದ ಲ್ಯೂಕ್ರಿಸಿಯ ಶಯ್ಯಾಗೃಹಕ್ಕೆ ನುಗ್ಗಿ, ಅವಳನ್ನು ಹೆದರಿಸಲು ನೋಡಿ, ಅವಳು ಸಗ್ಗದಿರಲು ಬಾಯಿಗೆ ಬಟ್ಟೆ ತುರುಕಿ, ಬಲಾತ್ಕಾರದಿಂದ ತನ್ನ ಕಾಮೇಚ್ಛೆಯನ್ನು ತೀರಿಸಿಕೊಂಡು, ಅದೇ ಬೆಳಗಿನ ಜಾವ ಪಾಳಯಕ್ಕೆ ಓಡಿಹೋದನು.

ಇತ್ತ ಲ್ಯೂಕ್ರಿಸಿ ಕೂಡಲೆ ದೂತರನ್ನು ಅಟ್ಟಿದಳು: ಕೆಲವರನ್ನು ತನ್ನ ತಂದೆಯನ್ನು ಕರೆತರುವಂತೆ, ರೋಮಿಗೆ; ಕೆಲವರನ್ನು ತನ್ನ ಗಂಡನನ್ನು ಕರೆತರುವಂತೆ, ಪಾಳಯಕ್ಕೆ. ಸ್ವಲ್ಪ ಹೊತ್ತಿನಲ್ಲೆ ತಂದೆಯೂ ಗಂಡನೂ ಬಂದರು, ತಮ್ಮ ತಮ್ಮ ಮಿತ್ರರೊಡನೆ. ಲ್ಯೂಕ್ರಿಸಿಯ ದುಗುಡ ತುಂಬಿದ ಮುಖವನ್ನು ಗಮನಿಸಿ, ಅದರ ಕಾರಣವನ್ನು ಕೇಳಿದರು. ಲ್ಯೂಕ್ರಿಸಿ ತನ್ನ ದುಗುಡಕ್ಕೆ ಕಾರಣ ಏನು, ಕಾರಣ ಯಾರು ಎಂಬುದನ್ನು ಸ್ಪಷ್ಟಪಡಿಸುತ್ತ ಇದ್ದಂತೆಯೇ ತಟಕ್ಕನೆ ಕಠಾರಿಯಿಂದ ಎದೆಯಿರಿದುಕೊಂಡು ಮಡಿದಳು.

ತಂದೆಯೂ ಗಂಡನೂ ಮಿತ್ರರೂ ಅವಳ ದೇಹದ ಬಳಿಯೆ ಒಂದು ಪ್ರತಿಜ್ಞೆ ಮಾಡಿದರು: ಟಾರ್ಕ್ವಿನರುಗಳ ವಂಶವನ್ನೆ ನಿರ್ಮೂಲಮಾಡಿಬಿಡುವೆವೆಂದು. ಲ್ಯೂಕ್ರಿಸಿಯ ಮೃತದೇಹವನ್ನು ರೋಮಿಗೆ ಎತ್ತಿಕೊಂಡು ಹೋಗಿ, ಜನರಿಗೆ ಆ ದಾರುಣವಾದ ಸಂಗತಿಯನ್ನು ವಿಶದಪಡಿಸಿದರು. ರೋಮಿನ ಜನ ಆ ಕರುಣದ ಕತೆಯಿಂದ ಕಲಕಿಹೋಗಿ ದೊರೆತನದ ವಿರುದ್ಧವಾಗಿ ಎದ್ದರು. ಅಂದಿನಿಂದ ರೋಮಿನಲ್ಲಿ ರಾಜರ ಪೀಳಿಗೆ ತಪ್ಪಿ, ರಾಜ್ಯದ ಭಾರ ಪುರದ ಹಿರಿಯರ ಹೆಗಲಿಗೆ ಬಂತು.

ಈ ದುರಂತಕಥೆಯನ್ನು ಷೇಕ್ಸ್‌ಪಿಯರ್ ಮಹಾಕವಿ 'The Rape of Lucrece' ಎಂಬ ಒಂದು ಖಂಡಕಾವ್ಯವಾಗಿ ರಚಿಸಿದ್ದಾನೆ.

ಬಿ. ಬಿ. ಡಿ. ಪವರ್ ಪ್ರೆಸ್, ಅರಳೇಪೇಟೆ, ಬೆಂಗಳೂರು ಸಿಟಿ.

(ಹೊರಡುವರು-ಅತ್ತಲಿಂದಲೂ ಪೋಲೀಸಿನವರು ಬಂದು ಹಿಡಿಯುವರು.)

ಇನ್ಸ್ಪೆಕ್ಟರ್:- ಹಿಡಿ! ಹಿಡಿ!........ನಡೆಯಿರಿ! ಎಲ್ಲರನ್ನೂ ತೆಗೆದುಕೊಂಡು ಹೋಗಿ ಲಾಕಾಪಿನಲ್ಲಿಡಿ! ...ನಾಳೇ ಕೋರ್ಟಿಗೆ ಹಾಜರ್ಮಾಡಬೇಕು.

(ಎಳೆದುಕೊಂಡು ಹೋಗುವರು)

ಸ ಮಾ ಪ್ತ.



# ಸಂಘದ ಪ್ರಕಟಣೆಗಳು

೧. **ಶ್ರೀ ಕೈಲಾಸಂ ಅವರ ಸ್ಮರಣೆ** ರೂ. ೨/೪
(ಕ್ಯಾಲಿಕೊ ಪ್ರತಿ) ರೂ. ೩/೪

ಶ್ರೀ ಕೆ. ವಿ. ಅಯ್ಯರ್ ಅವರು ಬರೆದುದು.

ಶ್ರೀ ಡಿ. ವಿ. ಗುಂಡಪ್ಪ ಅವರ ಮುನ್ನುಡಿಯೊಡನೆ.



೨. **ಕರ್ಣಾಟಕ ಮಾಲವಿಕಾಗ್ನಿಮಿತ್ರ ನಾಟಕಂ** ರೂ. ೧/೧೨
(ಕ್ಯಾಲಿಕೊ ಪ್ರತಿ) ರೂ. ೨/೧೨

ಶ್ರೀ ಮೋಟಗಾನಹಳ್ಳಿ ಶಂ. ಸುಬ್ರಹ್ಮಣ್ಯಶಾಸ್ತ್ರೀ ಅವರು ಸಂಸ್ಕೃತದಿಂದ ಅನುವಾದ ಮಾಡಿದ್ದು.

ಶ್ರೀ ಎ. ಆರ್. ಕೃಷ್ಣಶಾಸ್ತ್ರೀ ಅವರ 'ಕವಿ ಕಾವ್ಯ ಪರಿಚಯ'ದೊಂದಿಗೆ.



೩. **ಮೊನ್ನ ವನ್ನ** ರೂ. ೨/-
(ಕ್ಯಾಲಿಕೊ ಪ್ರತಿ) ರೂ. ೩/-

ಬೆಲ್ಜಿಯಂ ದೇಶದ ಮಾರಿಸ್ ಮ್ಯಾಟರ್‌ಲಿಂಕ್ ಎಂಬ ಕವಿಯ ಮೂರಂಕದ ನಾಟಕವನ್ನು ಶ್ರೀ ಎಸ್. ಜಿ. ಶಾಸ್ತ್ರಿ ಅವರು ಕನ್ನಡಿಸಿ ಕೊಟ್ಟಿದ್ದು.

ಶ್ರೀ ಜಿ. ಪಿ. ರಾಜರತ್ನಂ ಅವರ 'ಕವಿ ಕಾವ್ಯ ಪರಿಚಯ'ದೊಂದಿಗೆ.



೪. **ನಾಗನ ಪದಗಳು** ರೂ. ೧/೪
(ಕ್ಯಾಲಿಕೊ ಪ್ರತಿ) ರೂ. ೨/೪

'ರತ್ನನ ಪದಗಳು' ಜಾತಿಯ ಹೊಸ ಕವನಗಳ ಸಂಗ್ರಹ.

ಶ್ರೀ ರಾಜರತ್ನಂ ಬರೆದವು.



---

**ಕರ್ಣಾಟಕ ಸಂಘ, ಸೆಂಟ್ರಲ್ ಕಾಲೇಜ್, ಬೆಂಗಳೂರು**

---